ಅಂತರಂಗ 

ಸ್ಥಾಪನೆ: ೧೯೩೮

| ವರ್ಷ ೧೪ | ಪುಸ್ತಕ ಪತ್ರಿಕೆ, ಉಡುಪಿ | ಪುಸ್ತಕ ೯೯ |
|---|---|---|

# ಗುಪ್ತರೋಗ ನಿವಾರಣೆ

ಸ್ತ್ರೀ ಪುರುಷರ ಆರೋಗ್ಯರಕ್ಷಣೆಗಾಗಿ ಪ್ರಪಂಚದಲ್ಲಿನ
ವಿದ್ವಾಂಸವೈದ್ಯರುಗಳ ಅಮೂಲ್ಯ ಸಿದ್ಧಾನುಭವದ
ಉಪಯುಕ್ತ ಸಂಗ್ರಹವು

ಮಾರ್ಚ್, ೧೯೫೨

ಅಂತರಂಗ ಕಾರ್ಯಾಲಯ, ಉಡುಪಿ

0 8 0

# ವಿಷಯಸೂಚಿ











## ಇಂಥದೊಂದು ಪುಸ್ತಕದ ಆವಶ್ಯಕತೆ.

ಜನನೇಂದ್ರಿಯಗಳಿಗೆ ಸಂಬಂಧವಿರುವ ರೋಗಗಳು ಈ ದೇಶದಲ್ಲಿ ತುಂಬಾ ಹರಡಿಕೊಂಡಿವೆ. ಯಾವುದೊಂದು ಜಾತಿಯವರನ್ನಾಗಲಿ ಸಮಾಜದವರನ್ನಾಗಲಿ ಈ ರೋಗಗಳು ತಗಲದೆ ಇಲ್ಲ. ದೂರದ ಹಳ್ಳಿಗಳಲ್ಲಿ ಈ ರೋಗಗಳು ಪಸರಿ ಇರುವಂತೆಯೆ ಸುಧಾರಣೆ ಹೊಂದಿರುವ ನಗರಗಳಲ್ಲಾದರೂ ನುಗ್ಗಿಕೊಂಡೇ ಇವೆ. ಇವುಗಳ ದೆಸೆಯಿಂದಲೆ ಮರಣಸಂಖ್ಯೆಯೂ ಹೆಚ್ಚುತ್ತಲೇ ಇದೆ; ಆರೋಗ್ಯಸ್ಥಿತಿಯು ಕುಂದುತ್ತಲೇ ಇದೆ; ಸಂತತಿಯು ನಿರ್ವೀರ್ಯವಾಗಿಯೂ ಊನವುಳ್ಳದ್ದಾಗಿಯೂ ಹುಟ್ಟುತ್ತಲೇ ಇದೆ; ಜನಾಂಗದ ಪೌರುಷವು ಕ್ಷೀಣಗೊಳ್ಳುತ್ತಲೇ ಇದೆ. ಜನರಲ್ಲಿರುವ ಸ್ವಾಭಾವಿಕವಾದ ಲಜ್ಜಾಭಾವನೆಯೂ ಅಜ್ಞಾನವೂ ಈ ರೋಗಗಳು ಎತ್ತೂ ಹರಡುವ ಹಾಗೆ ಸಹಾಯಮಾಡುತ್ತಲಿವೆ.

ಇಂಥ ರೋಗಗಳಿಂದ ಉಂಟಾಗುವ ಹಾವಳಿಯ ಭಯಂಕರ ಸ್ಥಿತಿಯನ್ನು ಜನರಿಗೆ ತಿಳುಹಲೇ ಬೇಕಾಗಿದೆ. ಈ ರೋಗಗಳ ವಿಷಯವಾಗಿ ಇಂಗ್ಲೆಂಡಿನಲ್ಲಿ ಉಂಟಾದ ರೋಯಲ್ ಕಮಿಶನ್‌ರವರ ರಿಪೋರ್ಟಿನಲ್ಲಿ ಸುಪ್ರಸಿದ್ಧ ಡಾ। ಒಸ್ಲರ್‌ರವರು ಹೇಳಿದ ಅನುಭವಿಕ ಮಾತುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ:—ಮರಣಕಾರಕಗಳಾದ ರೋಗಿಗಳಲ್ಲಿ ಪರಂಗಿ ರೋಗವು ಮೂರನೆ ಅಥವಾ ನಾಲ್ಕನೆ ಸ್ಥಾನವನ್ನು ಲಭಿಸಿಕೊಂಡಿದೆ. ದೊಡ್ಡ ನಗರಗಳಲ್ಲಿ ಈ ರೋಗವುಳ್ಳವರ ಸಂಖ್ಯೆಯು ಜನಸಂಖ್ಯೆಯಲ್ಲಿ ಸೇಕಡಾ 10ಕ್ಕೆ ಕಡಿಮೆಯಾಗದು; ಮೆಹರೋಗ ಪೀಡಿತರ ಸಂಖ್ಯೆಯು ಇನ್ನಷ್ಟು ಅಧಿಕವಾಗಿರಬೇಕು. ಮಕ್ಕಳಲ್ಲಿ ಅರೆವಾಸಿ ಮಂದಿಯು ಕುರುಡತನಕ್ಕೂ, ಸಮಸ್ತರೊಳಗೆ ಕಾಲಂಶ ಮಂದಿಯು ಕುರುಡತನಕ್ಕೂ ಈ ರೋಗವೇ ಮೂಲಕಾರಣವಾಗಿದೆ. ಅಜನ್ಮ ಕಿವುಡತನದಲ್ಲಿ ಕಾಲಂಶ ಮಂದಿಯು ಈ ರೋಗದಿಂದಲೇ ಕಿವುಡಾಗುವರಲ್ಲದೆ, ಕಿವಿಯ ರೋಗಗಳ ಮತ್ತು ಕಿವುಡುತನಕ್ಕೆ ಫರಂಗಿಯೆ ಮೂಲವು. ಬಂಜೆತನವುಳ್ಳವರಲ್ಲಿ ಅರೆವಾಸಿ ಜನರು ಮೇಹ ಪೀಡಿತರು. ರೋಗಪೀಡಿತರ 1000 ಮಂದಿ ಮಕ್ಕಳಲ್ಲಿ 400 ಮಕ್ಕಳು ಹುಟ್ಟುವಾಗಲೆ ಅಥವಾ ಅದಕ್ಕೆ ಮೊದಲೇ ಮಡಿವವು. ಉಳಿದ 600ರಲ್ಲಿ 400 ಮಕ್ಕಳು ರೋಗಿಷ್ಠರು. ಹೀಗಿರುವಾಗ ಇಷ್ಟು ಹಾವಳಿಕರವಾದ, ಜನಬಾಧಕಕರವಾದ ಪ್ರಬಲ ರೋಗಗಳು ಇನ್ನಾವುವಿರಬಹುದು? ಪಕ್ಷವಾತ, ಪ್ರಬಲ ನರ ಸೆಳೆತ, ಮೊದಲಾದುವೂ ಹೆಚ್ಚಾಗಿ ಇವೇ ರೋಗಗಳಿಂದ ಉಂಟಾಗುವುವು. ಸಹಜವಾದ ಮಾತುಗಳಲ್ಲೂ ಯಥಾರ್ಥವಾದ ರೀತಿಯಲ್ಲೂ ಇದನ್ನು ತಿಳಿಯ ಹೇಳಬೇಕಾಗಿದೆ. ಈ ರೋಗಗಳು ಧಾರಾಳವಾಗಿ ಭಯಂಕರ ಗಂಡಾಂತರವನ್ನು ಉಂಟುಮಾಡುತ್ತಿವೆ ಎಂಬುದನ್ನು ಎಲ್ಲರಿಗೂ

ವ್ಯಕ್ತಪಡಿಸಬೇಕಾಗಿದೆ. ಇಂಥ ರೋಗಿಗಳು ತಮ್ಮ ಕುಟುಂಬ
ತಿಗೂ ಎಂಥ ಹಾನಿಯನ್ನು ಉಂಟುಮಾಡುವರೆಂಬುದನ್ನೂ
ಗಿದೆ. ಇವುಗಳ ಬಾಧೆ ತಟ್ಟದಂತೆ ಎಂಥ ನಿವಾರಣೋಪಾಯಗ
ಳ್ಳಬೇಕೆಂಬುದನ್ನೂ, ಇವು ತಟ್ಟಿದರೆ ಕೂಡಲೆ ಕೈಗೊಳ್ಳಬೇಕಾ
ಫಲಕಾರಿಗಳಾದ ಚಿಕಿತ್ಸೆಗಳಾವುವೆಂಬುದನ್ನೂ ಸರ್ವರಿಗೂ ವಿದಿ
ಕಲ್ಲದೆ,—ವೈದ್ಯ ಶಾಸ್ತ್ರಾನುಸಾರವಾದ ಮಾಹಿತಿಯನ್ನು ಧಾರಾ
ರೊಳಗೆ ಪ್ರಚುರಗೊಳಿಸಬೇಕಾಗಿದೆ.

ಹಿಂದೆ ಸೈನಿಕರೊಳಗೆ ಈ ರೋಗಗಳು ತುಂಬಾ ಹಾವಳಿ
ಮಾಡುತ್ತಿದ್ದುವು. ಈಗ ನಿವಾರಣೋಪಾಯ ಪ್ರಯೋಗದ ವ
ರೋಗಗಳ ಪ್ರಾಬಲ್ಯವನ್ನು ಮುರಿದಿರುವರೆಂದು ತಿಳಿದುಬಂದಿದೆ.
ಪಾಯಗಳನ್ನು ತಿಳಿಸಿದಲ್ಲಿ, ಜನರು ಈ ರೋಗಗಳಿಗೆ ಅಂಜುವು
ಯಾಗುವುದೆಂದೂ, ಇದರಿಂದ ಈ ರೋಗಗಳಿಗೆ ಜನರು ಬ
ಯೊಡ್ಡುವರೆಂದೂ, ಅವರೊಳಗಿರುವ ನೀತಿ ವರ್ತನವು ಮತ್ತಷ್ಟು
ದೆಂದೂ, ಈ ವಿಚಾರಗಳನ್ನು ಅವರಿಗೆ ತಿಳಿಸುವುದು ಅದುಕಾರಣ
ವಾದುದೆಂದೂ ಕೆಲವರು ಆಕ್ಷೇಪ ಹೇಳುವುದುಂಟು. ಆದರೆ, ಶಾ
ನೀತಿ ವಿಚಾರಗಳನ್ನೂ ಉಲ್ಲಂಘಿಸಿ ಜನರು ಈ ರೋಗಗಳಿಗೆ ತು
ವುದನ್ನು ಕಾಣುತ್ತಲಿರುವ ನಾವು,- ಏನೂ ಅರಿಯದ ಯುವಕರು
ಗಳ ಆಕ್ರಮಣದಿಂದ ಕಾಪಾಡಿಕೊಳ್ಳುವ ಹಾಗೆ ಅವರನ್ನು ಬೋ
ಯೋಗ್ಯವೆಂದೇ ಅಭಿಪ್ರಾಯ ಪಡುವೆವು. ಸಂಗದೋಷದಿಂದುಂ
ಜನನೇಂದ್ರಿಯ ಸಂಬಂಧವಾದ ರೋಗಗಳನ್ನು ಕುರಿತಾಗಿ ಸಾಮಾ
ವನ್ನು ಪ್ರತಿಯೊಬ್ಬನೂ ಪಡೆಯುವುದರಿಂದ, ಅವುಗಳ ಅಂಟ
ವಾಗಿರುವ ಹಾಗೆ ಎಚ್ಚರನಾಗನೆ? ಅದರಿಂದ ಈ ರೋಗಗಳ
ತಡೆವುದಲ್ಲವೆ? ಕ್ರಮೇಣ ಅವುಗಳ ಮೂಲೋತ್ಪಾಟನವಾಗ
ಇಂಗ್ಲಿಷು ಭಾಷಾಜ್ಞಾನವುಳ್ಳವರಿಗೆ ಈ ವಿಷಯದಲ್ಲಿ ಬೇಕಾದಷ
ಗಳಿವೆ; ಆದರೆ ಕನ್ನಡವನ್ನೆ ಮಾತ್ರ ಬಲ್ಲವರಿಗೆ ಇಂಥ ವಿಷಯ
ಬೋಧಿಸುವ ಪುಸ್ತಕಗಳೆ ಇಲ್ಲ. ಆದಕ್ಕಾಗಿಯೆ, ಈ ಚಿಕ್ಕ
ಬರೆಯಲ್ಪಟ್ಟಿರುವುದು. ಇದು 1923ರಲ್ಲೊಮ್ಮೆ ಅಚ್ಚಾಗಿತ್ತು.
ಎಂ. ಗೋಪಾಲಕೃಷ್ಣರಾಯರು ಇದನ್ನು ಅದರಾಭಿಮಾನದಿಂದ
ದಕ್ಕೆ ಪ್ರಕಾಶಕರು ಅವರಿಗೆ ಅಭಾರಿಗಳಾಗಿದ್ದಾರೆ.

# ಗುಪ್ತರೋಗ ನಿವಾರಣೆ

## (ಜನನೇಂದ್ರಿಯಗಳ ರೋಗಬಾಧಾ ನಿವಾರಣೆ)

1

### ರೀತಿಗೆಟ್ಟು ರೋಗಿಷ್ಠರಾದವರ ಕಡೆಗೆ ದಯೆ.

ಗುಹ್ಯೇಂದ್ರಿಯಗಳಿಗೆ ಸಂಬಂಧಪಟ್ಟ ರೋಗಗಳು ಅನಾದಿಕಾಲದಿಂದಲೂ ವಿಶೇಷವಾಗಿ ಹರಡುವ ಹಾಗೆ ಹಲವು ಕಾರಣಗಳಿವೆ. ಈ ರೋಗದಿಂದ ನರಳುವವರು ಲಜ್ಜಾಭಯದಿಂದ ತಮ್ಮ ನಿಜಸ್ಥಿತಿಯನ್ನು ಯಾರಿಗೂ ತಿಳಿಯಗೊಡುವುದಿಲ್ಲವೆಂಬುದೂ, ಈ ರೋಗಗಳೇ ಪೀಡಿಸುತಲಿದ್ದರೂ ಬೇರೆ ವಿಕಾರಗಳಿಗೆ ವಶವಾಗಿರುವೆನೆಂದು ರೋಗಿಗಳು ಹೇಳುವುದುಂಟೆಂಬುದೂ, ಹೆಚ್ಚಿನ ರೋಗಿಗಳು ಅಜ್ಞಾತವಾಸಕ್ಕೇ ತೆರಳಿ ಆರೈಕೆಹೊಂದುತ್ತ ಮತ್ತೆ ಹೊರಬೀಳುತ್ತಿರುವುದೂ ಮುಖ್ಯವಾದ ಕಾರಣಗಳು. ವಿಷಯಾಸಕ್ತರಾದವರ ಪಾಪಗಳ ಫಲವಾಗಿ ಈ ರೋಗಗಳು ಪೀಡಿಸುವುವೆಂದೂ, ಇವನ್ನು ಶಾಪರೂಪವಾಗಿ ಕಾಣಬೇಕೆಂದೂ, ಇವು ನಾಚಿಗೆಗೆಟ್ಟ ರೋಗಗಳೆಂದೂ, ಧಾರಾಳವಾಗಿ ಜನರಲ್ಲಿ ಭಾವನೆಯಿರುವ ಕಾರಣ, ಈ ರೋಗಿಗಳು ವಿಶೇಷವಾಗಿ ನರಳಬೇಕಾಗಿರುವುದು. ಮರ್ಯಾದೆಯುಳ್ಳವರಿಗೆ ಇಂಥ ರೋಗಗಳು ಉಂಟಾಗಲಾರವೆಂದು ನಂಬುಗೆ ಇರುವ ಕಾರಣ, ಇಂಥ ರೋಗಗಳು ಉಂಟಾದವರು ತಮ್ಮ ಮರ್ಯಾದೆ ತಪ್ಪುವುದೆಂದು ಹೆದರಿ ತಮ್ಮ ನರಳಿಕೆಯನ್ನು ಬಯಲಿಗೆ ತರುವುದೇ ಇಲ್ಲ. ಹೀಗಾಗಿ ತಮ್ಮ ರೋಗವು ಇಂಥದೇ ಎಂದು ಹೇಳುವುದಕ್ಕೂ ನಾಚುಗೆ; ವೈದ್ಯರಿಗೂ ಸಹ ಪ್ರಾಮಾಣಿಕವಾಗಿ ರೋಗಿಗಳು ತಮ್ಮ ರೋಗವು ಹೀಗೆಯೆ ಉತ್ಪನ್ನವಾಯಿತೆಂದಾದರೂ ತಿಳಿಸಲು ಮೊದಲು ಮೊದಲು ಹಿಂದೆಗೆದು ಮೋಸಹೊಂದುವರು.

ಮನುಷ್ಯಸ್ವಭಾವದ ಬಲವಾದ ಲಕ್ಷಣಗಳು ಎರಡಿವೆ. ಮೊದಲಾಗಿ ಸ್ವರಕ್ಷಣೋಪಾಯ, ಎರಡನೆದಾಗಿ ವಂಶವರ್ಧನೆಯ ಉಪಾಯ.

ಇವೆರಡು ತೀರ ಬಲವಾಗಿವೆಯಾದ ಕಾರಣ, ಈ ಉಪಾಯ
ಸಾಧಿಸುವುದರಲ್ಲಿ ಮನುಷ್ಯನು ದಾರಿಗೆಟ್ಟು ಅಪರಾಧಿಯಾಗುವುದು
ಇದು ತೀರ ಸುಲಭಸಂಭವವಾಗಿದೆ ಈ ದುಷ್ಟ ರೋಗಗಳ ಹ
ಒಳಗಾಗುವವರೊಳಗೆ ಯುವಕರ ಸಂಖ್ಯೆಯೆ ಪ್ರಾಮುಖ್ಯವಾಗಿ
ದಾಗಿದೆ. ನ್ಯಾಯುವಾದ ಸಾಧನಗಳನ್ನು ದೂರವಿಟ್ಟು ಅಕ್ರಮ
ಕೈ ಹಚ್ಚಿದುದೇ ಇವರ ತಪ್ಪು ಹಾಗೆ ಮಾಡುವುದಕ್ಕಾದರೂ,
ತದ ದೋಷವಾಗಲಿ ದುಸ್ಸಂಗವಾಗಲಿ ಕಾರಣಗಳು. ಎಳೆಯ
ದಲ್ಲಿ ವಿಷಯುಗಳು ಉದ್ರೇಕಗೊಳುವಾಗ, ಹೇಗೊ ಹಾಗೆ ಅವನ್ನು
ಗೊಳಿಸಲು ಹೊರಟ ಈ ಯುವಕರು, ಹಾಗೆ ಮಾಡುವುದರಿಂದ
ಭಯಂಕರವಾದ ಫಲಪ್ರಾಪ್ತಿಯಾಗಬಹುದೆಂದು ಸರ್ವಥಾ ಅರಿ
ಅಲ್ಲ. ಜನನೇಂದ್ರಿಯುಗಳ ಜತನವು ಅವರ ಆರೋಗ್ಯಕ್ಕೆ ಎಷ್ಟು
ವೆಂದೂ ಅವುಗಳಿಗೆ ಜಾಡ್ಯಹಿಡಿದಲ್ಲಿ ಅದು ಆಯುಷ್ಯದ ಹಾಗೂ
ನದ ಕ್ಷಯುಕ್ಕೇ ಕಾರಣವಾಗುವುದೆಂದೂ ಅವರು ತಿಳಿದವರಲ್ಲ.
ಅಲ್ಲದಿದ್ದರೆ, ಮನುಷ್ಯಸ್ವಭಾವವೇ ತಾನಾಗಿ ಯುವಕರ ಮನ
ನಾನಾ ಬಗೆಯಾಗಿ ಮೂಡಿಸುವ ಭಾವಗಳಿಗೆ ಇವರು ತುತ್ತಾಗಿ
ಪೌರುಷವನ್ನು ಕಳೆದುಕೊಂಡು ವಿಷಯುಗಳಿಗೆ ಅಧೀನರಾಗಿದ್ದ
ಬಹುದು. ಮನುಷ್ಯಸ್ವಭಾವವು ದುರ್ಬಲವಾದುದಕ್ಕೆ, ಯಾರೂ
ಕಠೋರತೆಯುನ್ನು ಧರಿಸಿಕೊಳ್ಳಕೂಡದು 'ವಿಷಯಾಸಕ್ತಿ
ನರಳುವ ರೋಗಿಗಳು ತಾವು ಮಾಡಿದ ಮಹಾ ಪಾಪದ ಫಲ
ಉಣ್ಣುತ್ತಾರೆ, ಅಂಥವರು ಸಾಯುವರಾದರೆ ಸಾಯಲಿ, ಅವರು
ಕಷ್ಟಕ್ಲೇಶಗಳನ್ನು ಅನುಭವಿಸಲೇ ಬೇಕಾಗಿದೆ' ಎಂದು ನಿಷ್ಕರುಣ
ಅಂಥ ದೀನರ ವಿಷಯದಲ್ಲಿ ದುಷ್ಟವಾದ ಭಾವನೆಗಳನ್ನು ನಾವು
ಕೊಳ್ಳಲಾಗದು ತಾವು ಸ್ವತಃ ಯಾವ ಅಪರಾಧವನ್ನೂ ಮಾಡ
ರಾದರೂ, ಈ ರೋಗಗಳ ಅಂಟು ತಗಲಿ ನರಳುವ ಎಷ್ಟೋ
ಇರುವರು; ಇವರ ಕಡೆಗಾದರೂ ನೀತಿಜ್ಞನು ಹೇಗೆ ನಡೆದುಕೊಳ್ಳ
ವಾಸ್ತವವಾಗಿ ನೋಡಿದರೆ, ಈ ರೋಗಿಗಳಲ್ಲಿ ಅನೇಕರು ಕೇವಲ
ಹಿಡಿದೇ ನರಳುವವರಲ್ಲದೆ ಸ್ವಕರ್ಮದ ಫಲವನ್ನುಣ್ಣುವವರೇ ಅಲ್ಲ

ರ ವಿಷಯವಾಗಿ ಸಜ್ಜನರಾದವರು ಸಾಧು ರೀತಿಯಲ್ಲಿಯೆ ವರ್ತಿಸಬೇಕಾಗಿದೆಯಾದರೂ, ಹಾಗೆ ವರ್ತಿಸುವವರು ಕಡಿಮೆಯೆಂಬುದು ದುಃಖದ ವಿಷಯ:ವಾಗಿದೆ. ಸಹಾನುಭೂತಿಯಿಂದಲೂ ಕನಿಕರದಿಂದಲೂ ಇಂಥ ರೋಗಿಗಳನ್ನು ನಾವು ಕಾಣುವುದು ಅತ್ಯಾವಶ್ಯವಾಗಿದೆ. ಇಂಥವರು ದುರ್ಭಾಗ್ಯರಾದ ಬಡದೀನರೆಂದೇ ನಾವು ಭಾವಿಸಬೇಕಲ್ಲದೆ, ಭಯಂಕರ ಪಂಚಮಹಾಪಾತಕಿಗಳೆಂದು ಎಂದೂ ಹೇಳಕೂಡದು. ಈ ನವೀನ ಭಾವವು ನಮ್ಮಲ್ಲಿ ಹೆಚ್ಚಿದ ಹಾಗೆಲ್ಲ, ಈ ರೋಗವನ್ನು ತ್ವರ್ಯದಲ್ಲಿ ಅಡಗಿಸಲು ಚೇತನವು ಉಂಟಾಗುವುದು ನಿಜ. ಮಾನವ ಜಾತಿಗೆ ಮಾರಿಸ್ವರೂಪವಾದ ಈ ರೋಗಗಳನ್ನು ಆಗ ನಿರ್ಮೂಲಿಸುವುದು ಸುಲಭಸಾಧ್ಯವಾಗುವುದು.



## 2
## ಗುಹ್ಯೇಂದ್ರಿಯಗಳ ಕುರಿತಾದ ಜ್ಞಾನ

ಈ ರೋಗಗಳನ್ನು ಕುಂದಿಸುವುದಕ್ಕಾಗಿ ವಿಲಾಯತಿಯ ಸ
ರಿತ ಸಮಾಜಗಳಲ್ಲೆಲ್ಲಿಯೂ ಚಳವಳವು ನೆಡೆಯುತ್ತಲೆ ಇದೆ. ಈ ಇ
ಯಗಳ ಆರೋಗ್ಯ ಜತನ ಮೊದಲಾದುವನ್ನು ಕುರಿತಾದ ಶಾಸ್ತ್ರ
ಬೋಧೆಯು ಪ್ರಾಮುಖ್ಯವಾಗಿ ಈ ಚಳವಳದ ಅಂಗವಾಗಿದೆ. ಪ
ವಯಸ್ಸಿಗೆ ಬಳಿದ ಯುವಕರಿಗೂ ಯುವತಿಯರಿಗೂ, ಮಾನವಸ್ವಭ
ಸಿದ್ಧವಾದ ವಿಷಯ ಉತ್ಸಾಹವು ಉಂಟಾದ ಕೂಡಲೆ, ಈ ರೋಗ
ಸ್ವಭಾವವನ್ನು ಕುರಿತಾದ ಸಂಪೂರ್ಣವಾದ ಮಾಹಿತಿಯು ತಿಳಿಸಲ
ಬೇಕಾಗಿದೆ. ಸುಮ್ಮನೆ ಹಾಗೆ ಹೀಗೆಂದು ಅರ್ಥಕ್ಕರ್ಥ ಅನುವ
ವಾಕ್ಯಗಳನ್ನು ತಿಳಿಸಿ ಫಲವಿಲ್ಲ ಈ ರೋಗಗಳು ತಗಲಿದರೆ ಎ
ಪರಿಣಾಮಗಳು ಉಂಟಾಗುವುವೆಂಬುದನ್ನೂ ತಿಳಿಸತಕ್ಕುದು. ಇವ
ಮತ್ತೊಬ್ಬರಿಗೆ ಹರಡಿಸಬಾರದೆಂದು ಅಂಟುರೋಗಗಳ ವಿಚಾರವ
ತಿಳಿಸತಕ್ಕುದು. ಈ ರೋಗ ಹಿಡಿದಲ್ಲಿ ಸಂತತಿಗೂ ಎಂಥ ದುಷ್ಪರಿಣಾ
ವಿದೆ ಎಂಬುದನ್ನೂ ವಿವರಿಸಬೇಕಾಗಿದೆ. ಈ ಜ್ಞಾನವೆಲ್ಲವೂ ಸ
ತರುಣಿಗೆ ಅಗತ್ಯವಿದ್ದಷ್ಟು ತರುಣನಿಗೆ ಅಗತ್ಯವಿರದು. ಪುರು
ಕೊಂಚ ಜಾಗರೂಕನಾದಲ್ಲಿ ಎಂದೂ ಈ ರೋಗಗಳು ತಟ್ಟದ ರ
ವರ್ತಿಸಬಹುದು ಆದರೆ ಹೆಂಗುಸಿಗೆ ಇದು ಇಷ್ಟು ಸುಲಭವಾ
ತಾನೆಷ್ಟೇ ಪರಿಶುದ್ಧೆಯಾಗಿ ಕೋಮಲೆಯಾಗಿ ಇರಬಲ್ಲಳಾದರೂ, ಭಾ
ಪತಿಯು ಎಂಥವನೆಂದು ಅವಳು ಹೇಗೆ ತಿಳಿಯಬಹುದು? ತನ್ನ ವ
ಳನ್ನು ಯಾರ ಆರೈಕೆಗೆ ಒಪ್ಪಿಸುವಳೊ ಅವರಾದರೂ ರೋಗಪೀಡಿತ
ವೆಂದು ಅವಳು ಹೇಗೆ ತಾನೆ ತಿಳಿವಳು? ವಿವಾಹವಾಗುವ ಮೊ
ಪ್ರತಿಯೊಬ್ಬ ಕನ್ಯೆಗೂ ಈ ರೋಗಗಳು ಯಾವುವೆಂಬುದೂ, ಇಂಥ ರೋ
ಯೊಬ್ಬನೊಡನೆ ತನಗೆ ವಿವಾಹವಾದಲ್ಲಿ ಹಾನಿಯೆಷ್ಟಿದೆ ಎಂಬುದೂ
ದಿರಲೇ ಬೇಕಾಗಿದೆ.

ವರದಕ್ಷಿಣೆಯ ವಿಚಾರ, ಕುಟುಂಬದ ಆದಾಯ, ಕುಲದ ಗೌ

ಸ್ವರೂಪ ಸೌಂದರ್ಯ ಮೊದಲಾದೆಲ್ಲವುಗಳ ವಿವಾದ ವಿಮರ್ಶೆಗಳಿಂತಲೂ, ಆರೋಗ್ಯದ ಯಥಾರ್ಥ ಸ್ಥಿತಿಯನ್ನು ಚೆನ್ನಾಗಿ ಪರಾಂಬರಿಸಿ ವಿಮರ್ಶಿಸಿಕೊಳ್ಳುವುದು ಎಷ್ಟೋ ಮಹತ್ವದ ವಿಷಯವಾಗಿದೆ! ಈ ಸಂಗತಿಯು ಮಾತ್ರ ಈಗ ವಿವಾಹ ಘಳಿಸತಕ್ಕ ಜವಾಬುದಾರಿಯುಳ್ಳವರಿಗೆ ಇನ್ನೂ ತಿಳಿದಿಲ್ಲ ವಿವಾಹದ ಎರಡು ಪಕ್ಷಗಳೊಳಗೆ ಪ್ರತಿಯೊಂದು ಪಕ್ಷದವರು ವಧೂವರರ ದೇಹಾರೋಗ್ಯ ಸ್ಥಿತಿಯನ್ನು ಕುರಿತಾಗಿ ಪ್ರಸಿದ್ಧ ಸತ್ಯವಾದೀ ಡಾಕ್ಟರುಗಳಿಂದ ಅಭಿಪ್ರಾಯ ಹೊಂದುವಂತೆ ನಿರ್ಧಾರಮಾಡುವ ವ್ಯವಸ್ಥೆ ನಡೆಸಿದರೆ, ಅದರಿಂದ ಲೋಕದಲ್ಲಿ ಎಷ್ಟೋ ಅನಾರೋಗ್ಯವು ದೂರವಾಗಿ, ಜಗತ್ತಿನ ಅಮಂಗಲ ಕ್ಲೇಷಗಳು ವಿನಾಶಹೊಂದುವುವು. ಜಾತಕಗಳ ಕೂಟವನ್ನು ನೋಡಿಯೆ ವಿವಾಹ ಸಂಬಂಧಗಳನ್ನು ನಿಶ್ಚಯಮಾಡುವುದರ ಬದಲಾಗಿ, ವೈದ್ಯಕೀಯದೃಷ್ಟ್ಯಾ ವಿಮರ್ಶಿಸಿ ನಿಶ್ಚಯಮಾಡುವುದು ಹೆಚ್ಚಾಗಿ ಸಂಗತವಾಗಿವೆ ಎಂದು ತಿಳಿಯತಕ್ಕುದಾಗಿದೆ.

ವಿಲಾಯತಿಯ ಪ್ರಾಮುಖ್ಯ ದೇಶಗಳಲ್ಲಿನ, ಪ್ರತಿಯೊಂದು ಮುಖ್ಯ ಕೇಂದ್ರಸ್ಥಾನಗಳಲ್ಲಿ, ಪ್ರಸಿದ್ಧರಾದ ಡಾಕ್ಟರುಗಳು ಯುವಕರಿಗೂ ಯುವತಿಯರಿಗೂ ಜನನೇಂದ್ರಿಯಗಳಿಗೆ ಸಂಬಂಧಪಟ್ಟ ಆರೋಗ್ಯರಕ್ಷಣೆಯ ವಿಚಾರದಲ್ಲೂ, ಅವುಗಳಿಗೆ ಉಂಟಾಗುವ ರೋಗಗಳ ವಿಚಾರದಲ್ಲೂ, ಧಾರಾಳವಾಗಿ ವ್ಯಾಖ್ಯಾನೋಪದೇಶವನ್ನು ಮಾಡುತ್ತಲಿರುವಂತೆ ಏರ್ಪಾಡು ಇರುವುದು. ಗುಹ್ಯೇಂದ್ರಿಯಗಳ ರೋಗಗಳನ್ನು ಕುರಿತಾಗಿ ಪತ್ರಿಕೆಗಳೂ, ಪ್ರಕಟನಗಳು, ಅವುಗಳ ಕಾರಣ ಅರೈಕೆ ಚಿಕಿತ್ಸೆ ನಿವಾರಣೋಪಾಯ ಮೊದಲಾದುವನ್ನು ಸೂಚಿಸತಕ್ಕ ಇತರ ಮಾಹಿತಿಯುಳ್ಳ ವಹಿಗಳೂ, ನಿಷ್ಪ್ರಯೋಜಕರಾದ ಪಂಡಿತರುಗಳಿಂದಾದ ಟಕ್ಕು ಚಿಕಿತ್ಸೆಯನ್ನು ಅಂಗೀಕರಿಸದಂತೆ ಜಾಗ್ರತೆಯೂ ಬೋಧಿಸಲಾಗುವ ಹಾಗೆ, ಎಳೆ ಪ್ರಾಯದವರಿಗೆ ಮಾತ್ರವಲ್ಲದೆ, ಕಾರ್ಖಾನೆಗಳಲ್ಲೂ ಕೂಲಿಯಾಳುಗಳಿಗೂ ಧರ್ಮಾರ್ಥವಾಗಿ ವಿಶೇಷವಾಗಿ ಪ್ರಚುರಗೊಳಿಸಲಾಗುತ್ತಿವೆ. ಇವೇ ಪ್ರಸ್ತಾಪಗಳನ್ನು ಕಾದಂಬರೀಕಾರರೂ ನಾಟಕಕಾರರೂ ತಮ್ಮ ಗ್ರಂಥಗಳಲ್ಲಿ ವಿಶದಗೊಳಿಸುವರು. ಸಿನೆಮ ನಾಟಕಾದಿಗಳಲ್ಲಿ ಯುವತಿ

ಯನ್ನು ಪುರುಷನೊಬ್ಬನು ಮನೆಹೊರಡಿಸೋಣ, ಅವಳೊಡನೆ
ಚಾರ ನಡೆಸೋಣ ಮೊದಲಾದುವನ್ನು ಪ್ರದರ್ಶಿಸುವಾಗ, ಅವುಗಳ
ಯಿಂದ ಉಂಟಾಗುವ ದುಷ್ಪರಿಣಾಮಗಳನ್ನೂ ಚೆನ್ನಾಗಿ ಪ್ರದ
ಬೇಡವೇ? ವಿಷಯಾಸಕ್ತಿಯನ್ನೆ ಪ್ರದರ್ಶಿಸುವುದಲ್ಲ; ವಿಷಯಲ
ತೆಯ ಅಚಾತುರ್ಯದ ಪರಿಣಾಮವನ್ನೂ ನಾಟಕಶಾಲೆಗಳು ಪ್ರದ
ಬೇಕಾಗಿದೆ. ದುಷ್ಟವರ್ತನೆಗೆ ಮನಸೆಳೆವಂಥ ಶಕ್ತಿಯನ್ನು ನಾ
ಳುಂಟುಮಾಡುವುದರಿಂದ, ಪ್ರೇಕ್ಷಕರ ಮನೋಭಾವಗಳ ಮೇಲೆ
ಪರಿಣಾಮಗಳು ಉಂಟಾಗುತ್ತವೆ. ಹಾಳು ಸೂಳೆಯನ್ನು ನಾಟ್ಯ
ಮೇಲೆ ಕುಣಿಸುವುದರಲ್ಲಿ, ಅವಳು ಸುಂದರಿಯಾಗಿರುವಳಾದರೆ, ಯ
ದೋಷವನ್ನೆಣಿಸುವುದಿಲ್ಲ; ಅವಳ ಸಿಂಗಾರ ಅಭಿನಯಗಳು ಮನವ
ವಂತಾದರೆ ಸರಿ ಅವಳೇ ಕುರೂಪಿ, ರೋಗಪೀಡಿತೆ, ಇತರ
ರೋಗಗಳನ್ನು ಅಂಟಿಸಿಕೊಳ್ಳುವ ವಿಷಸ್ವರೂಪಿಣಿ, ಎಂಬುದನ್ನು
ಕರಿಗೆ ತೋರಿಸಿಕೊಟ್ಟರೆ,—ವಿಷಯಲಂಪಟತೆಯ ಹಾವಳಿ ಅನ
ಅಯೋಗ್ಯತೆಗಳು ಎಲ್ಲರಿಗೂ ತುಂಬಾ ವ್ಯಕ್ತವಾಗುವುವು. ಹೀಗೆ
ಜೀವನಕ್ಕೆ ಅತಿ ಅಮೂಲ್ಯವಾದ ಇಂದ್ರಿಯಗಳ ವಿಚಾರದಲ್ಲಿ ಯಾ
ವಿಧದಿಂದಲಾದರೂ ಜನರೊಳಗೆ ತುಂಬಾ ವಿವೇಕವನ್ನು ಹರಡಿಸು
ಹಿಂತೆಗೆಯಲಾಗದು. ಮುಂದೆ, ಮಾಯಾಲಾಂದರು ಮೂಲಕವಾ
ಸಿನೆಮಗಳ ಮೂಲಕವಾಗಲಿ ಜನನೇಂದ್ರಿಯ ರೋಗಗಳನ್ನು ಕು
ಸ್ಪಷ್ಟ ಮಾಹಿತಿಯು ಯಾವತ್ತು ಜನರಿಗೆ ದೊರೆವ ಹಾಗೆ ಸಾಧ್ಯ
ಬಹುದಾಗಿ ನಂಬಲು ಆಸ್ಪದವಿದೆ.



## 3

## ಉಪದಂಶ (Syphilis) ಫರಂಗಿರೋಗ.

ಗುಹ್ಯೇಂದ್ರಿಯ ರೋಗಗಳಲ್ಲಿ ಪ್ರಾಮುಖ್ಯವಾಗಿ ಮೂರು ರೋಗಗಳಿವೆ. ಫರಂಗಿರೋಗ, ಮೇಹರೋಗ, ತೊಡೆಬಾಳೆ. ಇವು ಇತ್ತೀಚಿಗೆ ಮಾತ್ರ ವಿಚಾರಕ್ಕೆ ಒಳಪಟ್ಟವೆ. ಇವುಗಳಲ್ಲಿ ಅತಿ ಹಾನಿಕರವಾದುದು ಉಪದಂಶ ಅದನ್ನು ಕುರಿತೇ ಮೊದಲಾಗಿ ಬರೆವೆವು. ಅಮೇರಿಕದ ಡಾ। ಅಬ್ರಾಮ್ಸ ಎಂಬವರ ಅಭಿಪ್ರಾಯದಂತೆ,—ಈ ರೋಗದ ಮೂಲಕಾರಣದಿಂದಲೇ ಭಯಂಕರಗಳಾದ ಮಹಾ ರೋಗಗಳೆನ್ನುವ ಭಗಂಧರ, ಕ್ಷಯ ಮೊದಲಾದುವು ಹುಟ್ಟುವುವಂತೆ. ಸಿಡುಬು ಮೊದಲಾದ ರೋಗಗಳಲ್ಲಿ ಒಂದು ವೇಳೆ ಚಿಕಿತ್ಸೆ ನಡಸದೆ ಇದ್ದರೂ ರೋಗಿಯ ದೇಹದಾರ್ಢ್ಯದ ಶಕ್ತಿಯಿಂದಲೇ ಬೊಕ್ಕೆಗಳೆದ್ದು ಹೋಗಿ ರೋಗಿಯು ಎಷ್ಟೋ ವೇಳೆ ಗುಣಹೊಂದುವುದು ಇದೆ; ಈ ರೋಗದಲ್ಲಿ ಅಂಥದೇನೂ ನಡೆಯದು ದೇಹದ ಮಜ್ಜೆಯೊಳಕ್ಕೆ ಈ ರೋಗದ ಸಾರವು ಇಳಿದು ನುಗ್ಗಿ ನುಗ್ಗಿ, ಕಾಲಕಳೆದಂತೆ ಮತ್ತೂ ಮತ್ತೂ ನೂತನ ಪ್ರಕಾಶಹೊಂದಿ, ಬೇರೆ ಬೇರೆ ರೋಗರೂಪವಾಗಿ ಹೊರಬೀಳುವುದು. ಅದಲ್ಲದೆ, ಇದರ ಹಾವಳಿಗೆ ಒಳಗಾಗದೆ ಇರುವ ಅಂಗವ್ಯಾವುದೂ ಇರುವುದಿಲ್ಲ. ಇದರ ವಿಷವು ಎಷ್ಟು ತೀಕ್ಷ್ಣವಾದುದೂ ಸೂಕ್ಷ್ಮವಾದುದೂ ಎಂದರೆ, ಬಹುಕಾಲದ ಚಿಕಿತ್ಸೆಯಿಂದಲಾದರೂ, ಈ ವಿಷಯವನ್ನು ಸಂಪೂರ್ಣವಾಗಿ ನಾಶಗೊಳಿಸಬಹುದು ಎಂದಾದರೂ ಖಂಡಿತ ಹೇಳಬರುವುದಿಲ್ಲ. ಅದು ಪ್ರತಿಯೊಂದು ದೇಹಾಣುಗಳಲ್ಲಿ ನುಗ್ಗುವುದೇ ನಿಜ. ಇದರ ದುಷ್ಪರಿಣಾಮಗಳಾದರೊ, ರೋಗಿಗೆ ಮಾತ್ರವೇ ಆಗಲಿ, ರೋಗದ ಅಂಟು ತಗಲಿದವರಿಗೆ ಮಾತ್ರವೇ ಆಗಲಿ ಬಾಧೆಕೊಡುತಕ್ಕುವಲ್ಲ; ಸಂತತಿಯವರೆಗೂ ನುಸುಳಿ, ಎರಡು, ಮೂರು ತಲಾಂತರದವರೆಗೆ ಇವರ ಅಂಟುಗಳು ಉಜ್ಜೀವಿಸಿಯೆ ಇರುವುದು. ರೋಗಿಯಲ್ಲೂ ಅವನ ಸಂತತಿಯಲ್ಲೂ ಇದರ ಹಾವಳಿಯು ತೋರಿಬಂದು,—ದೇಹ ದೌರ್ಬಲ್ಯ, ಕ್ಷೀಣತೆ, ಮೆದುಳಿನ ಶಿಥಲತೆ, ನರಗಳ ಅಶಕ್ತಿ

ಮುಂತಾದ ರೂಪದಲ್ಲಿ ಪ್ರಕಟಗೊಳ್ಳುವುದು. ಹುಚ್ಚರ ಆಸ್ಪತ್ರೆ
ತುಂಬುವ ಹಾಗೆಯೂ ನರರೋಗಿಗಳನ್ನು ಹೆಚ್ಚಿಸುವ ಹಾ
ಈ ರೋಗವೇ ಪ್ರಬಲ ಕಾರಣವೆಂದು ಇತ್ತೀಚೆಗೆ ತಾನೆ ಪ
ಕಂಡುಹಿಡಿದಿರುವರು.

ಈ ರೋಗದ ಶಕ್ತಿಯೂ ಪ್ರಬಲ; ತಡೆದೋರದೆ ಬೆಳೆ
ಶಕ್ತಿಯೂ ಪ್ರಬಲ; ಇದು ಹರಡಿರುವುದೂ ಧಾರಾಳ. ಯುರೋ
ರಲ್ಲಿ ನೂರಕ್ಕೆ 5ರಿಂದ 20ಮಂದಿಯ ತನಕವೂ ಈ ರೋಗದಿಂದ
ಶರಾದವರೇ. ಹಿಂದೀಯರಲ್ಲಾದರೂ ಈ ರೋಗಿಗಳ ಪರಿಮ
ಕಡಿಮೆಯಾಗಿಲ್ಲ. ಡಾ| ಅಲ್ಬರ್ಟ ಅಬ್ರಾಮ್ಸರೆಂಬ ಅಮೆ
ಸುಪ್ರಸಿದ್ಧ ಡಾಕ್ಟರರು,— ನಾವೆಲ್ಲರೂ ಹೆಚ್ಚು ಕಡಿಮೆ ಈ ರೋ
ಪೀಡಿತರೇ ಸರಿಯಾದರೂ, ಕೆಲವರಲ್ಲಿ ಇದರ ಬಲವಧಿಕ, ಕೆ
ಅಲ್ಪ, ಇಷ್ಟೇ ಭೇದ, — ಎಂದೆನ್ನುವರು.

**ಈ ರೋಗದ** ಇತಿಹಾಸವು ವಿಚಿತ್ರವಾಗಿದೆ. ಅಮೇರಿ
ಕಂಡುಕೊಳ್ಳಲು ತೆರಳಿದ ಕೊಲುಂಬಸ ನಾವಿಕನ ಜತೆಯ ನಾ
ಮಧ್ಯಅಮೇರಿಕದಿಂದ ಈ ರೋಗವನ್ನು ಕ್ರಿ. ಶ 1493ರಲ್ಲಿ ಸ್ಪೇ
ದೇಶಕ್ಕೆ ತಂದರೆಂದೂ, ಅಲ್ಲಿಂದ ಅದು ಪ್ರಪಂಚದಲ್ಲೆಲ್ಲ ಹರಡಿ
ತೆಂದೂ ಈಗ ನಂಬಲಾಗಿದೆ. ಇದಾಗ ಸ್ವಲ್ಪ ಕಾಲದೊಳಗೆ
ಗೀಸರು ಅದನ್ನು ನಮ್ಮ ದೇಶಕ್ಕೂ ತಂದರು. ಹೊಸ ಭೂ
ದಿಂದ ಸ್ಪೈಯಿನನವರು ತಂದ ಈ ರೋಗವು ಹಳೆಯದೊಂದು ರೋ
ಮತ್ತೊಂದು ರೂಪವೇ ಅಲ್ಲದೆ ಬೇರೆಯಲ್ಲವೆಂದೂ ವಾದಿಸು
ಇದ್ದಾರೆ ಅಂತೂ, ಈ ರೋಗವು ತೀವ್ರಸ್ವರೂಪದ್ದೆನ್ನುವರು.
ದೆರಡು ರೋಗಗಳು ಈ ದೇಶದಲ್ಲಿ ಬಹುಕಾಲ ಹಿಂದಣಿಂದಲೂ
ರೋಗಗಳೇ ಹೊರತು, ಹೊಸತಾಗಿ ಬಂದವುಗಳಲ್ಲ.

**ಇದರ ಅಂಟು ಹರಡುವ ವಿಧಾನ:-** ಹೆಚ್ಚಾಗಿ, ಈ
ಗವು ತಾಜಾ ಸಂಗದೋಷದಿಂದಲೇ ಹುಟ್ಟುವುದು. ರೋಗವಿ
ಯೊಡನೆ ಸಂಗವಾದಲ್ಲಿ ರೋಗದ ಸಂಗವೂ ಆಗುವುದು.
ಅಂಥ ರೋಗಿಷ್ಟ ವ್ಯಕ್ತಿಯ ಸಂಸರ್ಗದಿಂದಲೂ ಆಗುವುದು; ಅ

ಬಗೆಯ ಅಂಟು ಜನನೇಂದ್ರಿಯಗಳನ್ನಾಗಲಿ, ತುಟಿ, ಕಣ್ಣು ವ ಅಂಟು ಇಂಗಬಹುದಾದಂಥ ಚಿಕ್ಕದೊಂದಾದರೂ ಗಾಯ ಅಥವಾ ಗೀರು ಇರುವಲ್ಲಿಯಾಗಲಿ ತಗಲತಕ್ಕದು. ಹೀಗಾದಲ್ಲಿ ಇದರ ಅಂಟು ಸುಲಭವಾಗಿ ತಗಲಿ ಹರಡುತ್ತ ದೇಹದೊಳಕ್ಕೆ ಪ್ರವೇಶಮಾಡುವುದು ಪ್ರತ್ಯಕ್ಷವಾಗಿ ರೋಗಿಯನ್ನು ಮುಟ್ಟದೆ ಇದ್ದರೂ ಈ ರೋಗದ ಅಂಟು ತಗಲಬೇಕಾದರೆ, ರೋಗಿಯ ದೆಸೆಯಿಂದ ಎಂಥ ಬಗೆಯಲ್ಲಾದರೂ ತ್ಯಾವವನ್ನು ಹೀರಿಕೊಳ್ಳಬೇಕಾಗುವುದು. ಎಂದರೆ ಉದಾಹರಣೆಗಾಗಿ, ರೋಗಿ ಮುಟ್ಟಿದ ತಟ್ಟೆ, ಅವನು ಸೇದಿದ ಹೊಗೆಬತ್ತಿ, ಅವನು ಉಪಯೋಗಿಸಿದ ಚಮಚೆ, ಕರವಸ್ತ್ರ, ಕೊಳಲು ಮೊದಲಾದ ವಾದ್ಯ, ಅವನ ಕ್ಷೌರಕತ್ತಿ ಇತ್ಯಾದಿ. ಇವನ್ನು ರೋಗಿಯು ಸ್ಪರ್ಶಿಸಿ, ತ್ರ್ಯಾವವಿರುವ ಹಾಗೆ ಆಗಲೆ ಬಿಟ್ಟುದನ್ನು, ಕೂಡಲೆ ರೋಗವಿಲ್ಲದವನು ಮುಟ್ಟಿದರೂ ಸಾಕಾಗುವುದು. ರೋಗಿಯು ಮುಟ್ಟಿದ ಎಂಥದನ್ನಾದರೂ ಚೆನ್ನಾಗಿ ಒಣಗಿಸಿದ್ದಲ್ಲಿ, ರೋಗದ ಅಂಟು ಮತ್ತೊಬ್ಬನಿಗೆ ಆ ಸಂದರ್ಭದಿಂದ ಹರಡಲಾರದು.

ಅನೇಕವೇಳೆ ಈ ರೋಗವು ಪಿತ್ರಾರ್ಜಿತವಾಗಿಯೆ ಬರುವುದು; ಅಥವಾ ಫಕ್ಕನೆಯೊಂದು ಸಂದರ್ಭದಿಂದಲೂ ಬರುವುದು.

ತಮ್ಮದೇನೂ ಅಪರಾಧವಿಲ್ಲದೆ ಈ ರೋಗವು ತಗಲುವುದಾದರೆ ಇದು ಐದು ರೀತಿಯಲ್ಲಿ ತಗಲಬಹುದು;—

1. ಗಂಡಂದಿರಿಂದ ಹೆಂಡಿರು ಇದನ್ನು ಪಡೆವರು ಫ್ರಾನ್ಸು ದೇಶದಲ್ಲಿರುವ ಹೆಂಗುಸರೊಳಗೆ ನೂರಕ್ಕೆ 75 ಮಂದಿಯಂತೆ ಮದುವೆಯಾಗುವ ಮೊದಲೆ ಗುಣವಾಗಿತ್ತೆಂದು ನಂಬಿದ ಅವರ ಗಂಡಂದಿರಿಂದಲೇ ಈ ರೋಗವನ್ನು ಪಡೆದಿರುವರಾಗಿ ಎಣಿಸಲಾಗಿದೆ.

2. ತಂದೆ ಅಥವಾ ತಾಯಿಗೆ ಈ ರೋಗವಿದ್ದುದರಿಂದ ಸಂತತಿಗೆ ಅರ್ಜಿತವಾಗಿ ಈ ರೋಗವು ತಗಲುವುದು.

3. ಪ್ರೀತಿಯ ಫಲವಾಗಿ ಈ ರೋಗವು ಪರಿಣಮಿಸುವುದಿದೆ:— ಬಾಯಿಯಲ್ಲಿ ಫರಂಗಿ ಹುಣ್ಣಿರುವ ರೋಗಿಗಳು ಮಕ್ಕಳನ್ನು ಮುದ್ದಾಡಿದರೆ,—(ವಿಲಾಯತಿಯಲ್ಲಿ ಈ ರೀತಿ ಚುಂಬಿಸುವುದು ಸಾಮಾಜಿಕ

ಗೃಹಸ್ಥವಳಿಗೆಯು ರೂಢಿಯಾಗಿದೆ) -- ರೋಗದ ಅಂಟು ಕ
ಎಳೆಯ ಮಗುವಿಗೆ ಹರಡದೆ ಇರಲಾರದು ನಮ್ಮಲ್ಲಿಯೂ ಎಂ
ವರೂ ಮಕ್ಕಳನ್ನು ಚುಂಬಿಸುವುದಿದೆ; ಮಕ್ಕಳಿಗೆ ಈ ರೋಗವು ತ
ವುದಕ್ಕೆ ಇದೊಂದು ಸಾಧನವೆ

4. ತಮ್ಮ ವೃತ್ತಿಯನ್ನು ಅನುಸರಿಸುವಾಗ .ವೈದ್ಯರ
ಗಳು ಸೂಲಗಿತ್ತಿಯರು ಮುಂತಾದವರಿಗೆ ಈರೋಗವು ತಗಲುವುದು

5. ರೋಗಿಯ ಹುಣ್ಣುಗಾಯಗಳ ಅಂಟಿನ ಸಂಪರ್ಕದಲ್ಲಿದ್ದ
ಪಾತ್ರೆಗಳು ಬಟ್ಟೆಗಳು ಆಯುಧಗಳು ಮುಂತಾದುವನ್ನು ಅಜಾ
ಯಿಂದ ಥಕ್ಕನೆ ಮುಟ್ಟಿದ್ದಲ್ಲಿ, ಮೇಲೆ ಹೇಳಿದ ರೀತಿಯಲ್ಲಿ ಅಂಟು ತ
ವುದು.

### ಮೊದಲನೆ ಲಕ್ಷಣಗಳು.

ಈ ರೋಗಕ್ಕೆ ಮೂರು ಬೇರೆ ಬೇರೆ ಸ್ಥಿತಿಗಳಿವೆ ಅ
ತಗಲಿದ 2ರಿಂದ 5 ಹಪ್ತೆಗಳ ಒಳಗೆ, ಹೆಚ್ಚಾಗಿ ಜನನೇಂದ್ರಿಯ
ಯಾವುದೊಂದು ಭಾಗದಲ್ಲಿ, ಕೆಂಪಾದ ಬೊಕ್ಕೆ ಅಥವಾ ಚಿಕ್ಕ ಹ
ಏಳುವುದುಂಟು. ಇದನ್ನು ಪಕ್ಕನೆ ನೋಡಿದರೆ ಮಚ್ಚೆಯೊ, ಕ
ಚಿಕ್ಕ ಮುಡುಬವೊ ಎಂದು ಭಾಸವಾಗುವುದು ಇದು ಆಗಾಗ
ಸುವ ಕಾರಣವೇ ಇದರ ಕಡೆಗೆ ಲಕ್ಷ್ಯವು ಹರಿಯುವುದು. ಕ್ರ
ಈ ಮಣಿಯೆ ದೊಡ್ಡದಾಗಿ, ಅದರ ಅಡಿಯು ಗಟ್ಟಿಯಾಗುತ್ತ
ವುದು. ಆಗ ಅದರ ಮೇಲ್ಭಾಗವು ಹುಣ್ಣಾಗಿ, ಅದರಿಂದ ಒಂದು
ಅಂಟಾದ ದ್ರವವು ಹರಿದು ಬರುವುದುಂಟು (ಕೆಲವೇಳೆ ಒಂದೆ
ಎದ್ದ ಹುಣ್ಣಿನ ಅಂಟನ್ನು ರೋಗಿಗಳೇ ದೇಹದ ಇತರ ಭಾಗ
ಅಜಾಗ್ರತೆಯಿಂದ ಹರಡಿರುವುದೂ ತಿಳಿದುಬಂದಿದೆ) ಈ
ಒಂದು ಒಂದೂವರೆ ತಿಂಗಳ ತನಕ ಇರುವುದುಂಟು; ಆದರೆ ಇದಕ್ಕಿಂ
ಅಧಿಕವಾದ ಸಮಯದ ತನಕವೂ ಅದು ಇರಬಹುದಾಗಿದೆ ಈ
ತಲೆದೋರಿದ 15-30 ದಿನಗಳ ನಂತರ ತೊಡೆ ಸಂದಿನಲ್ಲಿರುವ
ಗಳು ಬಾತುಕೊಳ್ಳುವುವು; ಗ್ರಂಥಿಗಳೂ ಗಟ್ಟಿಯಾಗುವುವು
ಇದಕ್ಕೆ ತೊಡೆವಾಳಕ್ಕಿರುವಂಥ ಬೇನೆಯೇನೂ ಇರುವುದಿಲ್ಲ

ನಂತರ,— ಕೊರಲಸಂಧಿನ, ಮೊಳಗಂಟಿನ. ಕಂಕುಳದ ಗ್ರಂಥಿಗಳು ಹಾಗೆಯೆ ಬಾತುಕೊಳ್ಳುವುದುಂಟು. ದೇಹದಲ್ಲಿ ಜ್ವರವಾಗಿ, ಗಂಟು ಗಳಲ್ಲೆಲ್ಲ ಬೇನೆಯಾಗಿ, ಸ್ನಾಯುಗಳೂ ನೋಯುವುದುಂಟು.

## ಎರಡನೆ ಸ್ಥಿತಿಯ ಲಕ್ಷಣಗಳು

ಅಂಟು ತಗಲಿದ ಕೆಲವು ಹಪ್ತೆಗಳ ಅಥವಾ ತಿಂಗಳುಗಳ ನಂತರ ಮೈಯ ಚರ್ಮದ ಮೇಲೆ ಅಲ್ಲಲ್ಲಿ ಬೊಕ್ಕೆಗಳು ತೋರಬಹುದು- ಈ ರೋಗದ ಖಂಡಿತ ಲಕ್ಷಣಗಳಲ್ಲಿ ಈ ಚರ್ಮಸ್ಫೋಟವೇ ಮುಖ್ಯವಾಗಿದೆ. ಚರ್ಮಸ್ಫೋಟವು ಗುಲಾಬಿ ಬಣ್ಣದ ಚುಕ್ಕೆಗಳಾಗಿ ಮೊದಲು ತೋರಿ, ನಂತರ ಬೊಕ್ಕೆಗಳಂತೆದ್ದು, ಅಲ್ಲಲ್ಲಿ ತೆಳ್ಳನೆ ಚರ್ಮ ಪರೆಯಿರುವಲ್ಲೆಲ್ಲ ದಪ್ಪನಾಗುತ್ತಲಿದ್ದು, ಗುದದ್ವಾರದಲ್ಲಿ ಬಾಯೊಳಗೆ ಅಥವಾ ನಾಲಗೆಯ ಮೇಲೆ ತೋರುವುದು. ಇವು ಬೇನೆ ತೋರುವುವು; ಗುದದ್ವಾರದಲ್ಲಾದರೆ ತುರಿಕೆಗೆ ಪ್ರಾರಂಭವಾಗುವುದು. ಅಂಗೈಯ ಮೇಲೆ ಸ್ಪಷ್ಟವಾದ ದಪ್ಪ ಭಾಗಗಳುಂಟಾಗುವುವು. ಅಡಿಗಾಲ ಮೇಲೂ ಹಾಗೆಯೆ. ಥಕ್ಕನೆ ರೋಮಗಳು (ಕೂದಲು) ಅಲ್ಲಲ್ಲಿ ಬಿದ್ದುಹೋಗುವುವು. ಇವೇ ಈ ವ್ಯಾಧಿಯು ಬೆಳೆವಾಗ ಕಾಣುವ ಲಕ್ಷಣಗಳು. ಇವಲ್ಲದೆ, ಇದು ಖಂಡಿತವಾಗಿಯೂ ಫರಂಗಿ ರೋಗವೇ ಅಲ್ಲವೇ ಎಂದು ನಿರ್ಧಾರ ಮಾಡುವುದಕ್ಕೆ ಅನುಭವಿಕರಾದವರಿಗೂ ವೈದ್ಯರಿಗೂ ಸೂಕ್ಷ್ಮವಾಗಿ ತಿಳಿದುಬರುವಂಥ ಇತರ ಖಾತರಿ ಲಕ್ಷಣಗಳಿವೆ. ಆರಸಿನ ಮುಂಡಿಗೆ, ತಲೆಸಿಡಿತ, ಸ್ಮೃತಿಭ್ರಂಶ ಇತ್ಯಾದಿ ಉಪಪೀಡೆಗಳು ಈ ಸ್ಥಿತಿಯಲ್ಲಿದ್ದಾಗಲೆ ತಲೆದೋರುವುವು ಮೂತ್ರದಲ್ಲಿ ಬಿಳುಪು (ಲೋಳೆ) ದ್ರವವು ಹೆಚ್ಚುವುದು. ಎಲುವುಗಳು ಬಾತುಕೊಳ್ಳುವುವು. ಇವುಗಳ ಬೇನೆ ಬಹಳವಾಗುವುದು ಕಣ್ಣಾಲಿಯು ಬಾತುಕೊಂಡು ದೊಡ್ಡದಾಗುವುದು. ಈ ಲಕ್ಷಣಗಳಿಂದ ಈ ರೋಗವು ಒಳಗಣ ಅವಯವಗಳಲ್ಲಿ ಹೇಗೆ ಪ್ರವೇಶಿಸಿ ಬಳೆಯುತ್ತಿದೆಯೆಂದು ತಿಳಿಯಬಹುದಾಗಿದೆ

## ಮೂರನೆ ಸ್ಥಿತಿಯ ಲಕ್ಷಣಗಳು.

ರೋಗಕ್ಕೆ ಸರಿಯಾಗಿ ಚಿಕಿತ್ಸೆ ನಡೆಸದೆ ಇದ್ದರೆ, ಅದು ತಗಲಿದ ಮೂರನೆ ವರುಷದಿಂದ ಹತ್ತನೆ ವರುಷದೊಳಗೆ ಈ ಲಕ್ಷಣಗಳು ಕಾಣಬ

ಹುಸಾಗಿದೆ:- ಚರ್ಮದ ಮೇಲೆ ಉರುಟಾದ ಬೊಕ್ಕೆಗಳಂತೆ ಸಿಡಿತವೆದ್ದು, ಅವು ಬಾತುಕೊಳ್ಳುವುವು. ಬಾಯಿಯ ಮೇಲ್ಮಾಳಿಗೆಯಲ್ಲಿ ತೂತುಬಿದ್ದು, ಮೂಗುದಿನ್ನೆಯೂ ಇಳಿದು, ಒಟ್ಟಾಗಿ ರೂಪಗೆಡುವುದು. ಇದೂ ಅಲ್ಲದೆ ದೇಹದೊಳಗಣ ಅವಯವಗಳೆಲ್ಲವೂ ನಾಶವಾಗಲು ಪ್ರಾರಂಭವಾಗುವುದು ಎಳೆ ವಯಸ್ಸಿನವರಲ್ಲಿ ಸ್ಮೃತಿತಪ್ಪಿ ಮೂರ್ಛೆಯಾಗುವಿಕೆ, ಬೇರೆ ಬೇರೆ ತರದ ಪಕ್ಷವಾತ, ನಡೆವಾಗ ಬೇನೆ ಬಿದ್ದು ತಡೆವಂಥ ಕಠಿನವಾದ ಸೆಳೆತ, ಫಕ್ಕನೆ ಕಿವಿ ಕಿವುಡಾಗುವುದು, ಕಣ್ಣು ಮಂಜವಾಗುವುದು, ಹೃತ್ಕಮಲ, ಮೆದುಳು, ಮೂತ್ರಗುಡ್ಡುಗಳು ಅಬಲವಾಗುವುದು ಇತ್ಯಾದಿ ದೋಷಗಳು ಈ ರೋಗದ ಸ್ಥಿತಿ ಸೂಚಕಗಳಾಗಿವೆ. ಹುಚ್ಚುತನವು ಹೆಚ್ಚುವುದಕ್ಕೆ ಈ ರೋಗವೆ ತುಂಬಾ ಕಾರಣವಾಗಿದೆ; ಮಾತ್ರವಲ್ಲ, ಹುಚ್ಚರು ಪಕ್ಷವಾತದಿಂದ ನರಳುವುದಕ್ಕೂ ಇದೇ ಕಾರಣ.

### ಸಂತತಿಗೆ ಈ ರೋಗದ ಪರಿಣಾಮ.

ಈ ರೋಗದ ಹಾವಳಿಯು ಸಂತತಿಗೂ ಇನ್ನಷ್ಟು ಭಯಂಕರವಾಗಿ ತಟ್ಟುವುದು. ಗರ್ಭಸ್ರಾವವಾಗುವುದಕ್ಕೂ, ಶಿಶುಗಳು ಸತ್ತೇ ಹುಟ್ಟುವುದಕ್ಕೂ ಅನೇಕ ವೇಳೆ ಇದೇ ಕಾರಣವು. ಜೀವಿತ ಶಿಶುಗಳಾದರೂ ಜನ್ಮಕಾಲದಲ್ಲಿಯೆ ಹೆತ್ತವರಿಂದ ಆರ್ಜಿತವಾದ ಫರೆಂಗಿ ರೋಗದ ಲಕ್ಷಣವನ್ನು ಸರಿಯಾಗಿ ಸೂಚಿಸುವುವು. ಇಂಥ ಕೂಸುಗಳು ಜನನದ ನಂತರ ಅತ್ಯಲ್ಪ ಕಾಲದೊಳಗೆ ಮಡಿಯುವುವು ಅಥವಾ ಬೆಳೆದರೂ ಕುರೂಪಿಗಳಾಗಿ ಸರಿಯಾಗಿ ಪುಷ್ಟತೆಯನ್ನು ಹೊಂದದೆ, ನಾನಾ ಕೊರತೆಗಳಿಂದೊಡಗೂಡಿದ್ದು ಜೀವವೇ ಭಾರವಾಗುವ ಹಾಗೆ ತೋರಿಕೊಂಡು ಬಾಳುವುದುಂಟು ಹೆತ್ತವರಿಂದ ಪಡೆದುದಾದರೆ ಕುರುಡುತನ, ಕಿವುಡುತನ, ಬುದ್ಧಿಮಾಂದ್ಯ, ಮರುಳು, ಮೊದಲಾದ ದೈಹಿಕ ಹಾಗೂ ಮಾನಸಿಕ ದುರ್ಬಲತೆಯನ್ನು ಈ ರೋಗವು ಉಂಟುಮಾಡುವುದು ಮೊದಲು ನೆಟ್ಟಗಿರುವ ಹಾಗೆ ಕಾಣುವ ಮಕ್ಕಳಾದರೂ. ಬೆಳೆದಂತೆ, ಈ ರೋಗವನ್ನು ಜನ್ಮದಲ್ಲೆ ಪಡೆದುದರ ಪರಿಣಾಮಗಳನ್ನು ಅತ್ಯಲ್ಪ ಕಾಲದೊಳಗೆ ಸ್ಫುಟರೂಪದಿಂದ ತೋರಿಸುವುದುಂಟು. ಈ ಬಗೆಯಾಗಿ, ಫರೆಂಗಿ ರೋಗವು, ಮಾನವ ವಂಶವೇ ಕುಂದುವ ಹಾಗೆ ಮುಖ್ಯ ಕಾರಣವಾದ ರೋಗವಾಗಿದೆ.



## 4

## ಮೇಹರೋಗವು. (Gonorrhoea.)

ಜನನೇಂದ್ರಿಯದ ರೋಗಗಳಲ್ಲಿ ಮೇಹರೋಗವೇ ಪ್ರಾಬಲ್ಯದಲ್ಲಿ ಎರಡನೆಯದು. ಎಲ್ಲೆಲ್ಲಿಯೂ ಈ ರೋಗವು ಹರಡಿದೆ ಫರೆಂಗಿ ರೋಗಕ್ಕಿಂತ ಈ ರೋಗವು ಹೆಚ್ಚಾಗಿ ಪ್ರಚುರಗೊಂಡಿದೆ. ಪುರುಷರ ಮೂತ್ರೇಂದ್ರಿಯಗಳ ಒಳಚರ್ಮಕ್ಕೂ ಸ್ತ್ರೀಯರ ಜನನೇಂದ್ರಿಯಗಳ ಒಳಪರೆಗಳಿಗೂ ಇದು ತಲಗುವುದು ಈ ರೋಗವು ಮುಖ್ಯವಾಗಿ ಸ್ತ್ರೀಸಂಗದ ದೋಷದಿಂದಲೇ ಹೆಚ್ಚಾಗಿ ತಟ್ಟುವುದು; ಆದರೂ, ಫರೆಂಗಿ ರೋಗದಂತೆ ಈ ರೋಗವೂ ಅಕಸ್ಮಾತ್ತಾಗಿ ಅಂಟು ತಗಲಿ ಹರಡುವುದೂ ಇದೆ. (ಕೆಲವೇಳೆ ಮೂತ್ರನಾಳಗಳು ಬಾತುಕೊಳ್ಳುವುದುಂಟು; ಇದನ್ನು ಮೇಹದ ಲಕ್ಷಣವೆಂದು ತಿಳಿದುಕೊಳ್ಳಲಾಗದು ಹೀಗೆ ಬಾತುಕೊಂಡಾಗಲೂ ಬಿಳೀ ಕೀವು ಹೊರಡುವುದಿದೆ. ಈ ತೆರದಲ್ಲಿ ಬಾತುಕೊಂಡಾಗ, ಮೇಹರೋಗಕ್ಕಿಂತ ಸಾಮಾನ್ಯವಾದ ನೋವು ಉಂಟಾಗುವುದು; ಕೆಲವು ದಿನಗಳೊಳಗೆ ಇದು ತಾನಾಗಿ ಗುಣಹೊಂದುವುದು. ಸಾಧಾರಣ ಶಕ್ತಿಯ ಇಂಜಕ್ಷನುಗಳಿಂದ ಇದನ್ನು ತ್ವರ್ಯದಲ್ಲಿ ಗುಣಪಡಿಸಲೂ ಬಹುದು. ಈ ರೋಗವಾದವರ ಮೂತ್ರ ಮಾರ್ಗದಿಂದ ಸ್ರವಿಸುವ ಕೀವನ್ನು ಸೂಕ್ಷ್ಮದರ್ಶನಿಯಲ್ಲಿ ಪರೀಕ್ಷಿಸಿ ನೋಡಿ ಅದರಲ್ಲಿ 'ಗೊನೊಕಾಕಸ್' ಎಂಬ ರೋಗಜಂತುಗಳಿವೆಯೆಂದು ವಿಜ್ಞಾನಿಗಳು ನಿರ್ಧರಿಸಿದ್ದಾರೆ. ರೋಗದ ಅಂಟು ಒಬ್ಬರಿಂದ ಮತ್ತೊಬ್ಬರಿಗೆ ಹರಡಲು ಈ ರೋಗಜಂತುಗಳೇ ಕಾರಣವಾಗಿರುತ್ತವೆ.

ಗಂಡುಸರಲ್ಲಿ ಮೇಹರೋಗವು ತಗಲಿದೆ ಎಂಬುದನ್ನು ಕಂಡುಕೊಳ್ಳುವುದು ಸುಲಭ; ಬೇನೆ ವಿಪರೀತ; ಹೆಂಗುಸರಲ್ಲಿ ಈ ರೋಗವನ್ನು ಅರಿತುಕೊಳ್ಳುವುದು ಅಷ್ಟು ಸುಲಭವಲ್ಲ, ಬೇನೆ ಕಡಿಮೆ. ಹೆಚ್ಚಾಗಿ ಈ ರೋಗವು ಹೆಂಗುಸರಲ್ಲಿದ್ದರೆ ತೋರಿಕೆಗೇ ಬೀಳುವುದು ಕಡಿಮೆ ಎನ್ನಬಹುದು. ಅಂಥ ಇಂದ್ರಿಯಗಳಿಗೆ ತಗಲುವ ಇತರ ವ್ಯಾಧಿಗಳಿಂದ

ಇದನ್ನು ಬೇರೆಯಾಗಿ ಗೊತ್ತು ಹಚ್ಚುವುದು ಸುಲಭವಾಗಿಲ್ಲ. ಈ ರೋಗ ತಗಲಿದ ಹೆಂಗುಸು ಅಷ್ಟೊಂದು ಸಂಕಟಪಡುವುದಿಲ್ಲ. ಎಷ್ಟೋ ವೇಳೆ ಆವಳಿಗೆ ಈ ರೋಗ ತಟ್ಟಿದೆಯೆಂದಾದರೂ ತಿಳಿದುಬರುವುದೂ ಇಲ್ಲದೆ ಇರುವುದುಂಟು. ಆದರೆ ಕೊನೆಗೆ ಇದರಿಂದಾಗುವ ಪರಿಣಾಮ ಗಳು ಭಯಂಕರವಾಗುವುದುಂಟು. ಹೆಂಗುಸರಿಗೆ ಈ ರೋಗವು ಹಿಡಿದಾಗ, ಮೊದಲು ಮೊದಲು ಇದರ ಪ್ರಸ್ತಾಪವೇ ಅವರಿಗೆ ತಿಳಿಯ ಬಾರದಷ್ಟು ಹಗುರವಾಗಿ ಈ ರೋಗದ ಲಕ್ಷಣಗಳು ಇರುವ ಕಾರಣ, ಈ ರೋಗವು ತಿಳಿಯದ ವಿಧದಿಂದ ಗಂಡಸರಿಗೂ ಅಂಟುವುದು ತೀರ ಸುಲಭವಾಗುತ್ತಿದೆ.

### ಲಕ್ಷಣಗಳು

ಗಂಡಸರಿಗೆ ಅಂಟು ತಗಲಿದ 2ರಿಂದ 6 ದಿನಗಳೊಳಗೆ ಆಗಾಗ ಉರಿದಂತಾಗಿ ಮೂತ್ರ ಸುರಿಯುವುದು, ಮೂತ್ರದ್ವಾರವು ಕೆಂಪೇರು ವುದು, ತುರಿಸಿಕೊಳ್ಳುವುದು ಇತ್ಯಾದಿ ಲಕ್ಷಣಗಳು ಕಾಣಿಸಿಕೊಳ್ಳು ವುವು. ಬಳಿಕ ದ್ರವವು ಸಿಂಬಳದಂತೆ ಮೊದಲು ಮೊದಲು ಸುರಿ ವುದು, ನಂತರ ಗಟ್ಟಿಯಾದ ಕೀವಾಗಿ ಸುರಿವುದು. ನಂತರ ಆ ದ್ರವದ ಬಣ್ಣವು ಹಳದಿ ಅಥವಾ ತುಸು ಹಸುರಾಗುವುದು. ಮೂತ್ರನಾಳದಲ್ಲಿ ಬಾತುಕೊಳ್ಳುವುದೂ, ಬೇನೆಯೂ ದ್ರವಸೋರುವುದೂ ಕ್ರಮೇಣ ಹೆಚ್ಚಾಗುತ್ತ ಬಂದು, ಅಲ್ಪಸ್ವಲ್ಪ ಜ್ವರವೂ ತಲೆದೋರುವುದು ಅಂಡಾ ಶಯಗಳೂ, ತೊಡೆಸಂದೂ, ತೊಡೆಗಳೂ ಬೇನೆ ತಗಲಿ ಮೃದುವಾಗು ವುವು. ಜನನೇಂದ್ರಿಯವು ನೆಟ್ಟಗಾಗಿ ಬೇನೆ ಹಿಡಿಯುವುದು; ರಾತ್ರಿ ಯಲ್ಲಿ ಇದೇ ಮುಖ್ಯ ಸಂಕಟವಾಗುವುದು. ತೊಡೆ ಬಾವೂ ಉಂಟಾಗ ಬಹುದು. ಕಠಿಣ ಜಾಡ್ಯವಾದಲ್ಲಿ, ಕೆಲವೇಳೆ ಮೂತ್ರನಾಳಗಳಿಂದ ರಕ್ತ ಸೋರುವುದೂ ಇರುವುದುಂಟು. ಸಾಧಾರಣ ಮೇಹವ್ಯಾಧಿಯಾದಲ್ಲಿ ಮೂರನೆ ಹಪ್ತೆಯಲ್ಲಿ ಬೇನೆ ಕಡಿಮೆಯಾಗಿ ನಾಲ್ಕನೆ ಅಥವಾ ಆರನೆ ಹಪ್ತೆಯಲ್ಲಿ ಪೂರ್ಣ ಗುಣತೋರುವುದುಂಟು. ಹೆಚ್ಚು ರೋಗಿಗಳಲ್ಲಿ ಬೇರೆ ಬಾಧೆಗಳು ಇದರೊಡನೆ ಉಪಕ್ರಮಿಸುವುವು. ಆಗ ರೋಗವು ತುಸು ಗುಂದಿದಂತೆ ತೋರುವುದಾದರೂ, ಕೆಲಕಾಲದ ನಂತರ ಚಿರಸ್ಥಾಯಿ

ಯಾಗುವುದುಂಟು. ಮೇಹರೋಗವು ದೀರ್ಘಕಾಲ ಪೀಡಿಸುವ ಮತ್ತು ಬೇಸರಕರವಾದ ರೋಗವು. ದೀರ್ಘಸ್ಥಾಯಿಯಾದಲ್ಲಿ ಮೂತ್ರವು ಕದಡಿದಂತೆ ಮಂದವಾಗುವುದು; ದ್ರವವಿಳಿಯುವುದು ಅಲ್ಪವಾದರೂ ಇದ್ದೇ ಇರುವುದು; ಪ್ರಾತಃಕಾಲ ನಿದ್ದೆಯಿಂದೆದ್ದಾಗ ಕೂಡಲೆ ಅದು ತಲೆದೋರುವುದು. ಇಂಥ ಸಂಭವದಲ್ಲಿ ಗಂಡುಸರಲ್ಲಿ ಮೂತ್ರ ನಾಳವು ಇಕ್ಕಟ್ಟಾಗಿ ಬಾವು ಉಂಟಾಗಬಹುದು; ಮತ್ತು ಮೂತ್ರದ್ವಾರವು ಸಂಕುಚಿದವಾಗಿ ವ್ರಣಬೀಳಬಹುದು; ಅದಲ್ಲದೆ ಮೂತ್ರನಾಳದ ಸುತ್ತಲಿನ ಅಂಗಗಳಲ್ಲಿ ತೂತುಗಳೇಳಬಹುದು. ಮತ್ತು ಇದರಿಂದ ಮೂತ್ರವು ಕೆಲವೇಳೆ ತಡೆಗಟ್ಟಿದಂತಾಗಿ ಹೊರಬೀಳದೆ, ಅದರ ಒತ್ತಾಟದಿಂದ ಮೂತ್ರನಾಳವು ಒಡೆದು ಮೂತ್ರವು ಅಂಡಗಳಲ್ಲಿಳಿದು ಜನನೇಂದ್ರಿಯದ ಚರ್ಮದ ಒಳಭಾಗಕ್ಕೆ ತಗಲಿ ನಿಲ್ಲುವುದೂ, ಕಿಬ್ಬೊಟ್ಟೆಯ ಅಡಿಗೆ ಇಳಿದು ಹರಿದು ಅದರ ವಿಷದ ದೆಸೆಯಿಂದ ಅವೆಲ್ಲ ಭಾಗಗಳು ಬಾತುಕೊಳ್ಳುವಂತೆ ಮಾಡುವುದೂ ಇದೆ. ಇಂಥ ರೋಗಸ್ಥಿತಿಯಲ್ಲಿ ಶಸ್ತ್ರಚಿಕಿತ್ಸೆಯು ಅತ್ಯಾವಶ್ಯಕವಾಗಿದೆ

ಈ ರೋಗದ ಅಂಟುಬೀಜಗಳು ಬಹು ಕಾಲದ ವರೆಗೆ ರೋಗಿಯಲ್ಲಿ ನಿಲ್ಲುವವು ಫರಂಗಿರೋಗ ಹಿಡಿದವನನ್ನು ಚಿಕಿತ್ಸೆ ಮಾಡಿ ಅವನಿಂದ ಆ ರೋಗದ ಅಂಟು ಹರಡದ ಹಾಗೆ ಮಾಡಬಹುದು. ಆದರೆ ಮೇಹರೋಗಿಯು ಬಹುಕಾಲದ ವರೆಗೆ ಈ ರೋಗದ ಅಂಟುಬೀಜಗಳನ್ನು ದೇಹದಲ್ಲಿಟ್ಟುಕೊಳ್ಳುವನು ಸ್ವಲ್ಪ ಅವಕಾಶವೂ ಅನುಕೂಲತೆಯೂ ಉಂಟಾದ ಕೂಡಲೆ, ಈ ಅಣುಗಳು ಕೂಡಲೆ ಉದ್ರೇಕಗೊಂಡು ಅವನನ್ನು ಪೀಡಿಸುವುವು; ಮಾತ್ರವಲ್ಲದೆ ಆವನ ಶರೀರದಿಂದ ಮತ್ತೊಬ್ಬನಿಗೆ ಅಂಟುವುದಕ್ಕೂ ಸಿದ್ಧವಾಗುವುವು. ಈ ರೋಗವು ಒಮ್ಮೆಗೆ ಗುಣಹೊಂದಿದಂತೆ ತೋರಿಬಂದರೂ, ಫಕ್ಕನೆ ಪುನಃ ತಲೆದೋರಿ, ಮೊದಲು ಪ್ರಾರಂಭವಾದಾಗ ಯಾವ ವಿಧದಲ್ಲಿ ಪ್ರಬಲಗೊಂಡಿದ್ದಿತೋ ಅದರಂತೆ ಪುನಃ ಪುನವಾಗಿ ಬಳೆದು ಪೀಡಿಸುವುದುಂಟು.

ದೀರ್ಘಕಾಲದ ಮೇಹದಿಂದ ಪೀಡಿತನಾದ ರೋಗಿಯು ಅಪರೂಪವಾಗಿಯಾದರೂ ನಿಜವಾಗಿಯೂ ಒಂದು ಬಗೆಯ ವಾತದಿಂದ ಪೀಡಿತ

ನಾಗುವುದುಂಟು. ಜನನೇಂದ್ರಿಯದ ಶಕ್ತಿಯು ಇದರಿಂದ ಕುಗ್ಗುವುದು. ಮನುಷ್ಯನು ನಿರ್ವೀರ್ಯನಾಗುವನು. ಹೆಂಗುಸರಲ್ಲಿ ಇದರ ಪೀಡಾ ಪರಿಣಾಮಗಳು ತುಂಬ ಶೋಚನೀಯವಾದುವು. ಇದು ಗರ್ಭಾಶಯ, ಗರ್ಭಕೋಶ, ಅಂಡಾಶಯ ಮೊದಲಾದುವನ್ನು ಒಂದೊಂದಾಗಿ ಕರಗಿಸಿ ಬಿಡುವುದು. ಸ್ತ್ರೀರೋಗಗಳೆಲ್ಲಕ್ಕೂ ಇದೇ ಮೂಲವಾಗುವದು. **ಸ್ತ್ರೀಯರ ಬಂಜೆತನಕ್ಕೆ ಇದೇ ಪ್ರಾಮುಖ್ಯ ಕಾರಣವು.** ಸಂತತಿಯಿಲ್ಲದಿರುವ ದಂಪತಿಗಳಲ್ಲಿ ಸ್ತ್ರೀಯರು ಈ ರೋಗ ಬಾಧೆಗೆ ಒಳಗಾಗಿರುವುದು ಹೆಚ್ಚಾಗಿದೆ.

ಮೇಹದ ದ್ರವವು ಕಣ್ಣಿಗೆ ತುಂಬಾ ಬಾಧಕಕರವಾಗಿದೆ. ಮೇಹದ ಕೀವು ರೋಗಿಯ ಅಜಾಗರೂಕತೆಯಿಂದ ಕಣ್ಣಿಗೆ ತಾಗಿದ್ದಲ್ಲಿ ಕುರುಡುತನವುಂಟಾಗಲೂ ಬಹುದು. ಮೇಹರೋಗ ಪೀಡಿತೆಯರಾದ ತಾಯಿಗಳು ಪ್ರಸೂತವಾದ ಕೂಡಲೆ,ಶಿಶುಗಳು ಜನನ ಕಾಲದಲ್ಲಿ ಯೋನಿದ್ವಾರಾ ಇಳಿದು ಬರುವಾಗ ಮೇಹದ ಕೀವು ತಗಲಿ ಅವುಗಳ ಕಣ್ಣೂ ಕುರುಡುಗಟ್ಟುವ ಸಂಭವವಿದೆ ಇದಕ್ಕಾಗಿ ರಜತ ಕ್ಷಾರದ ದ್ರವವನ್ನು(Nitrate of silver solution)ಪ್ರಯೋಗಿಸುವುದರಿಂದ ಈ ಬಾಧೆಯನ್ನು ನಿವಾರಣೆ ಮಾಡಬಹುದೆಂದು ವೈದ್ಯರು ಈಗಲೀಗ ಕಂಡುಹಿಡಿದಿರುತ್ತಾರೆ. ಹಿಂದೆಯಾದರೆ, **ಜನನ್ನ ಕಾಲದಲ್ಲಿ ತಟ್ಟಿದ ಮೇಹದ್ರವದ ಅಂಟಿನಿಂದ ಆಜನ್ಮ ಅಂಧತೆಯು** ವಿಶೇಷವಾಗಿ ಎಲ್ಲೆಲ್ಲಿಯೂ ಹರಡಿಕೊಂಡಿದ್ದಿತು. ಈಗಲೂ, ತತ್ಕಾಲಿಕವಾದ ಮತ್ತೂ ಉಪಯುಕ್ತವಾದ ಔಷಧೋಪಚಾರವನ್ನು ಮಾಡದೆ ಇದ್ದಲ್ಲಿ, ಎಳೆಕೂಸುಗಳು ಇದೇ ಗಂಡಾಂತರಕ್ಕೆ ತುತ್ತಾಗುವ ಸಂಭವವು ಇದ್ದೇ ಇರುವುದು.



## 5

## ತೊಡೆವಾಳ ರೋಗ. (Soft Chancre)

---

ಜನನೇಂದ್ರಿಯದ ರೋಗಗಳಲ್ಲಿ ಮೂರನೆಯದಾದ ತೊಡೆವಾಳ ರೋಗವು, ಹಿಂದೆ ಹೇಳಿದ ಎರಡು ರೋಗಗಳಿಗಿಂತ ಅಲ್ಪ ಬಾಧೆಯದು. ಇದು ಒಂದೇಸ್ಥಾನಕ್ಕೆ ತಗಲುವ ರೋಗ. ಬಾವು ಉಂಟಾದ ಬಳಿಕ ಹುಟ್ಟು ವ ಕೀವಿನಲ್ಲಿ ಇರುವ ರೋಗ ಬೀಜಗಳಿಂದಲೇ ಇದರ ಅಂಟು ಹರಡುತ್ತದೆ.

ಅಂಟು ತಗಲಿದ ಒಂದೆರಡು ದಿನಗಳಲ್ಲಿ, ಜನನೇಂದ್ರಿಯಗಳ ಹೊರ ಅವಯವಗಳಲ್ಲಿ ಚಿಕ್ಕದೊಂದು ಗುಡ್ಡು ಅಂಟು ತಗಲಿದ ಸ್ಥಾನ ದಲ್ಲಿಯೆ ಹುಟ್ಟುವುದು. ಇದು ಬೇಗನೆ ಒಡೆದು ಆಳವಾದೊಂದು ವ್ರಣ ವನ್ನುಂಟುಮಾಡುವುದು ಅದೂ ಬೇಗನೆ ಬೆಳೆಯುತ್ತದೆ. ಅದರಿಂದುಂ ಟಾಗುವ ಕೀವು ತುಂಬಾ ಅಂಟಿನದಾದ ಕಾರಣ, ಅನೇಕ ವೇಳೆ ಅದರ ಸಮೀಪದಲ್ಲೆಲ್ಲ ಬೇರೆ ಬೇರೆ ಇತರ ಬಾವುಗಳು ಉಂಟಾಗಿ ವ್ರಣವಾಗು ವುದು. ಇದರ ದೆಸೆಯಿಂದ ತೊಡೆವಾಳವು ಬಹುಮುಖಿಯಾಗಿದೆ. ಚಿ ಕಿತ್ಸೆಯನ್ನು ಸರಿಯಾಗಿ ನಡೆಸಿದರೆ ಬಹು ತ್ವರೆಯಲ್ಲಿ ಈ ರೋಗವನ್ನು ಗುಣಪಡಿಸಬಹುದಾಗಿದೆ. ಆದರೆ, ಕೆಲವೇಳೆ ಇದರ ಪ್ರಬಲ ರೂಪಗಳು ಉದ್ರೇಕಗೊಂಡಲ್ಲಿ, ಬೇಗನೆ ಹರಡುವ ಸ್ವಭಾವವುಳ್ಳ ಈ ಬಾವುಗಳು ಎಂಥ ಪ್ರವೀಣ ವೈದ್ಯರಿಗಾದರೂ ಮಣಿಯದೆ ಇರುವುದುಂಟು ತೊಡೆ ಸಂದಿನಲ್ಲಿರುವ ಗುಡ್ಡುಗಳು ಹೆಚ್ಚಾಗಿ ಒಂದೇ ಬದಿಯಲ್ಲಿ ಬಾತುಕೊಳ್ಳು ವುದು ಈ ರೋಗದಲ್ಲಿ ಕ್ಲೇಶಕರವಾದ ಸ್ಥಿತಿಯಾಗಿದೆ. ಫರಂಗಿ ರೋಗದಲ್ಲಿ ಈ ಗುಡ್ಡುಗಳು ಬಾತುಕೊಂಡರೆ ನೋವಿರದು. ಆದರೆ ಈ ರೋಗದಿಂದ ಬಾತುಕೊಂಡ ಗುಡ್ಡುಗಳು ತುಂಬಾ ಬೇನೆಯವು. ಇದು ಸಾಧಾರಣ ವಾಗಿ ಹುಣ್ಣಾಗಿ ಕೀವುಕಟ್ಟುವುದುಂಟು. ಎಲ್ಲಿಂದ ವ್ರಣವೊಡೆದು ಕೀವು ಹರಿಯುವುದೊ ಅಲ್ಲೆ ಬೇರೆ ಬಾವುಗಳೂ ಹುಣ್ಣುಗಳೂ ಉಂಟಾಗಲೂ ಬಹುದು. ಇದಕ್ಕೆ ಯೋಗ್ಯ ವೈದ್ಯರ ಚಿಕಿತ್ಸೆಯೆ ಮಾತ್ರ ತಡೆಯಾಗಿದೆ.

## 6

## ಜನನೇಂದ್ರಿಯದ ರೋಗಗಳ ಮೂಲೋತ್ಪಾಟನ

ಇವೆಲ್ಲ ರೋಗಗಳನ್ನು ನಿವಾರಿಸುವುದಕ್ಕೆ ಪ್ರಾಮುಖ್ಯವಾದ ಮೂರು ಸಾಧನಗಳಿವೆ: —

1. ಸರಕಾರದ ಕಟ್ಟು ಮತ್ತು ಜನರಿಗೆ ಶಿಕ್ಷಣ.
2. ಅಂಟು ತಗಲದ ಹಾಗೆ ಪ್ರತಿಯೊಬ್ಬರ ಜಾಗ್ರತೆ.
3. ಯೋಗ್ಯವಾದ ವೈದ್ಯಕೀಯ ಚಿಕಿತ್ಸೆ.

### I

ಸೂಳೆಗಾರಿಕೆಯೆ ಈ ಜನನೇಂದ್ರಿಯಗಳ ರೋಗಗಳಿಗೆ ಮೂಲ ಕಾರಣವಾಗಿದೆ. ವಿಲಾಯತಿಯ ಎಷ್ಟೋ ದೇಶಗಳಲ್ಲಿ ಸೂಳೆಗಾರಿಕೆಗೂ ಸರಕಾರವು ಒಂದು ಬಗೆಯ ಕ್ರಮವನ್ನೇರ್ಪಡಿಸಿ ತಡೆಯಿಟ್ಟಿದೆ. ವ್ಯಭಿಚಾರವನ್ನಾದರೂ ಮಾಡಲೆಳಸಿರುವ ಸೂಳೆಯರ ರಿಜಿಸ್ಟರನ್ನು ಪೋಲೀಸರು ಬರೆದುಕೊಂಡು, ಅವರೇ ಅಂಥ ವೃತ್ತಿಯನ್ನು ತಮ್ಮ ಕಾಲಕಾಲದ ವಿಮರ್ಶೆಗೆ ಒಳಪಟ್ಟು ನಡೆಸಬಹುದಾಗಿ ಕಾನೂನಿದೆ. ಆಗಾಗ ಕ್ಲಪ್ತ ಕಾಲಗಳಲ್ಲಿ ರಿಜಿಸ್ಟರಾದ ಹೆಂಗಸರು ವೈದ್ಯಕೀಯ ಪರೀಕ್ಷೆಗೆ ಒಳಪಡಬೇಕು ಅಗತ್ಯವಿದ್ದಲ್ಲಿ ಒತ್ತಾಯದಿಂದ ವೈದ್ಯಚಿಕಿತ್ಸೆಯನ್ನು ಮಾಡಿಕೊಳ್ಳಲೇಬೇಕೆಂದೂ ನಿಯಮವಿದೆ. ಲೈಸೆನ್ಸು ಪಡೆಯದೆ ವಾರವನಿತೆಯಾಗಬಾರದಂತೆ ನಿರ್ಬಂಧವಿದೆ. ಆದರೆ, ಇಂಥ ಸೂಳೆಗಾರಿಕೆಯ ಕಡ್ಡಾಯದ ಸೂತ್ರಗಳ ದೆಸೆಯಿಂದ, ಆ ವೃತ್ತಿಯು ಕಡಿಮೆಯಾಗುವ ಬದಲಾಗಿ ಹೆಚ್ಚಾಗಿದೆ! ಮಾತ್ರವಲ್ಲ, ರೋಗಗಳು ಹರಡುವುದೂ ಹೆಚ್ಚಿರುವುದು. ವೃದ್ಧೆಯರೇ ಸಾಧಾರಣವಾಗಿ ಈ ಪೋಲೀಸು ಕಾನೂನನ್ನು ಮನ್ನಿಸುವರು; ಎಳೇ ಪ್ರಾಯದವರೂ, ಗುಪ್ತ ವ್ಯಭಿಚಾರಿಣಿಯರೂ ಈ ಕಾನೂನಿಗೆ ಅಷ್ಟು ಒಳಪಡದೆ ಇರುವ ಕಾರಣ. ಇಂಥವರಲ್ಲಿ ನವೀನವಾಗಿ ಪ್ರವೇಶಿಸಿರುವ ರೋಗವಿಷವು ಮತ್ತೂ ಕಾಡುವಂಥದಾಗಿದೆ ಹಳೆಯವರಲ್ಲಾದರೆ ಅವರು ರಿಜಿಸ್ಟರಿನಲ್ಲಿರುವ ಕಾರಣ ನಿರ್ಬಂಧಕ್ಕೊಳಪಟ್ಟಿರುವರು. ಆದುದರಿಂದ ಕ್ರಮಿಕವಾದ ಸೂಳೆಗಾರಿಕೆಯು ನಿರ್ಬಂಧವಿಲ್ಲದ

ಸೂಳೆಗಾರಿಕೆಗಿಂತ ಅಧಿಕ ಹಾನಿಯದು. ನಿರ್ಬಂಧಕ್ಕೆ ಒಳಪಟ್ಟು ಇರುವ ಸೂಳೆಯು ತನ್ನಿಂದ ಸಾಧ್ಯವಾದಷ್ಟು ಕಾಲ ತನ್ನ ಜಾಡ್ಯವನ್ನು ಅಡಗಿಸಿ ದುಡಿಯಲಾರಂಭಿಸುವಳು. ಅವಳ ಅಸೌಖ್ಯವು ಹೊರಬಿದ್ದಲ್ಲಿ ಅವಳ ಜೀವನೋಪಾಯವು ಮುಗಿವುದೆಂದೇ ಅವಳ ಬೆದರಿಕೆ; ಇದೂ ಅಲ್ಲದೆ ಒತ್ತಾಯದಿಂದ ವೈದ್ಯೋಪಚಾರವನ್ನು ಪಡೆಯಬೇಕಾಗಿದೆ. ಪೋಲೀಸರ ಹಾವಳಿಯೂ ಕಡಿಮೆಯಿಲ್ಲ ಆದರೆ ನಿರ್ಬಂಧಕ್ಕೊಳಪಡದವಳು ತಾನಾಗಿ ವೈದ್ಯಕೀಯ ಚಿಕಿತ್ಸೆಗಾಗಿ ವೈದ್ಯರಲ್ಲಿಗೆ ಬರುವಳು; ಅವಳ ದುಡಿತವು ಅವಳ ಆರೋಗ್ಯವನ್ನು ಆದರಿಸಿದೆ. ಆರೋಗ್ಯದಿಂದಿರ ಬೇಕೆಂಬ ಆಸೆಯು ಅವಳಿಗಿದೆ. ಪೋಲೀಸರ ಈ ಕಾನೂನು ಇಲ್ಲದ ದೇಶ ಗಳಲ್ಲಿ, ರೋಗ ಬಾಧೆಗೆ ಬೆದರಿ ಯುವಕರು ಸೂಳೆಯರ ಮನೆಗಳನ್ನು ಸೇರುವುದಿಲ್ಲ. ಫ್ರಾನ್ಸಿನಲ್ಲಿ ಸೂಳೆಗಾರಿಕೆಯನ್ನು ಕುರಿತಾಗಿ ವಿಚಾರ ಮಾಡುವ ಕಮ್ಮಿಶನು ಮೊಕರೂರಾದ ಬಳಿಕ,— ಆ ಕಮ್ಮಿಶನಿನವರು ಸೂಳೆಗಾರಿಕೆಯ ನಿರ್ಬಂಧವನ್ನು ತೆಗೆದು ಹಾಕಬೇಕೆಂದು ಸೂಚಿಸಿದರು. ಅದುಕಾರಣ, ಸೂಳೆಗಾರಿಕೆಗೆ ನಿರ್ಬಂಧವನ್ನು ಮಾಡುವವರಲ್ಲಿ ಮೊದ ಲನೆಯವರಾದ ಫ್ರಾನ್ಸು ಜರ್ಮನಿಗಳಲ್ಲಿ ಈಗ ಆ ಸಾಧನೆಯನ್ನು ಬಿಟ್ಟು ಇನ್ನುಳಿದ ಸಾಧನೆಗಳ ಮುಖಾಂತರವಾಗಿ ಸೂಳೆಗಾರಿಕೆಯನ್ನು ತಡೆದು ಸಂಗಜನ್ಯವಾದ ರೋಗಗಳನ್ನು ನಿರ್ಮೂಲ ಮಾಡಲು ಪೇಚಾಟ ನಡೆಸುತ್ತಿದ್ದಾರೆ.

ಸ್ತ್ರೀಸಂಗಜನ್ಯ ರೋಗಗಳ ನಿರ್ಮೂಲ ಕ್ರಮವು ವಿಲಾಯತಿಯ ದೇಶಗಳಲ್ಲಿ ಬೇರೇ ವಿಧವಾದುದು. ಈ ನವೀನ ಕ್ರಮಗಳನ್ನು ರೂಢಿಗೆ ತರುವುದರಲ್ಲಿ ನೋರ್ವೆ ಸ್ವೀಡನ್ ದೇಶಗಳೇ ಮೊದಲಿನವು. ಇತರ ಅಂಟು ರೋಗಗಳಿಗೆ ಚಿಕಿತ್ಸೆಮಾಡುವ ಹಾಗೆಯೇ ಈ ರೋಗಗಳಿಗೆ ಉಪ ಚಾರ ನಡೆಸುವರು. ಬಹಿರಂಗ ಪ್ರಕಟನೆಯೆ ಮಂಜೂರಾದ ವಿಧಾನ ವೆಂದ ಬಳಿಕ, ಪ್ರತಿಯೊಬ್ಬ ರೋಗಿಯು ಸಾಧ್ಯವಾದಷ್ಟುಮಟ್ಟಿಗೆ ಯಾವ ನೊಬ್ಬ ಡಾಕ್ಟರನ ಆರೈಕೆಯಲ್ಲೇ ಇರಬೇಕಾಗುವುದು ನಿಜವಲ್ಲವೇ? ಯಾವನೊಬ್ಬ ರೋಗಿಯು ಸಂಪೂರ್ಣವಾಗಿ ಗುಣಹೊಂದದೆ ಇರುವಲ್ಲಿ ಮದುವೆಮಾಡಿಕೊಳ್ಳಬಾರದೆಂದೂ, ಇತರರಿಗೆ ಅವನಿಂದ ರೋಗದ

ಅಂಟು ಹಿಡಿದಲ್ಲಿ, ಅವನು ಅಂಥವರಿಗೆ ಪರಿಹಾರ ದ್ರವ್ಯವನ್ನು ಕೊಡಬೇಕಾಗುವ್ರದೆಂದೂ, ಅದಲ್ಲದೆ ಸರಕಾರದ ದಂಡನೆಗೂ ಪಾತ್ರರಾಗಬೇಕಾಗುವುದೆಂದೂ ರೋಗಿಗಳಿಗೆ ಡಾಕ್ಟರರು ತಿಳಿಸುವರು. ಇಂಗ್ಲೆಂಡಿನಲ್ಲಿಯೂ ಅಮೇರಿಕದ ಯುನೈಟೆಡ್ ಸ್ಟೇಟ್ಸನಲ್ಲಿಯೂ ಈ ವಿಧದ ಉಪಾಯವು ಹೆಚ್ಚಾಗಿ ಬಳಕೆಗೆ ಬರುತ್ತಲೇ ಇದೆ.

ಜನನೇಂದ್ರಿಯದ ರೋಗಗಳ ಚಿಕಿತ್ಸೆಯನ್ನು ಸರ್ಕಾರವು ಪ್ರತ್ಯೇಕ ಧರ್ಮಾಸ್ಪತ್ರೆಗಳಲ್ಲಿ ನಡೆಸಬೇಕಾಗುವುದು. ನೊರ್ವೆ ಸ್ವೀಡನು ಮೊದಲಾದ ದೇಶಗಳಲ್ಲಿ ಜನರಿಗೆ ಧರ್ಮಾರ್ಥವಾಗಿಯೂ ನಿಷ್ಪಕ್ಷಪಾತವಾಗಿಯೂ ಚಿಕಿತ್ಸೆಯ ಬಗ್ಗೆ ಸಲಕರಣೆಗಳನ್ನು ಏರ್ಪಡಿಸಿರುವ ಕಾರಣ ಈ ಜಾತಿಯ ರೋಗಗಳ ಹಾವಳಿಯು ನಿವಾರಣೆ ಹೊಂದಲು ಧಾರಾಳವಾದ ಸಾಹಾಯವಾಗಿದೆ.

ಎರಡನೆದಾಗಿ,—ಯಾರು ಈ ರೋಗಗಳ ಅಂಟನ್ನು ಹರಡಿಸಲು ಕಾರಣಭೂತರೊ ಅಂಥವರ ಮೇಲೆ ಸರಕಾರವು ಜವಾಬುದಾರಿಯನ್ನು ಹೊರಿಸಬೇಕಾಗಿದೆ. ನೋರ್ವೆಸ್ವಿಡನುಗಳಲ್ಲಿ ಪ್ರತಿವ್ಯಕ್ತಿಯೂ ಇಂಥ ಜವಾಬುದಾರಿಯನ್ನು ಹೊರಬೇಕಾಗಿದೆ. ಫ್ರಾನ್ಸಿನಲ್ಲಿ ಇಂಥ ಪ್ರಚಾರಕ್ಕೆ ದಂಡನೆ ಇದ್ದೇ ಇದೆ. ಇಂಥ ತಕ್ಷೀರುಗಳಿಗೆ ಜುಲುಮಾನೆ ವಿಧಿಸಬೇಕೆಂಬುದಾಗಿಯೂ ಸಜೆ ಕೊಡಬೇಕೆಂಬುದಾಗಿಯೂ ಕಾನೂನಾಗಲು ಅಮೇರಿಕದಲ್ಲಿ ಪ್ರಬಲವಾದ ಅಭಿಪ್ರಾಯವಿದೆ. ಇಂಥ ವಿಷಯಗಳಲ್ಲಿ ಜನರು ಕೋರ್ಟು ವ್ಯವಹರಣೆ ನಡೆಸುವ ಹಾಗಿಲ್ಲವೆಂಬುದು ಸಹಜ. ಅದೂ ಅಲ್ಲದೆ, ಎಲ್ಲಿಂದ ಅಂಟು ಹರಡಿತೆಂಬ ಮೂಲಕಾರಣವನ್ನು ಹುಡುಕುವುದೂ ಆದನ್ನು ರುಜುಪಡಿಸುವುದೂ ಕಷ್ಟವಾಗಿದೆ ಆದರೂ ಜನನೇಂದ್ರಿಯದ ರೋಗಗಳನ್ನು ಪ್ರಚುರಿಸುವುದು ದಂಡನಾರ್ಹವೆಂದು ಕಾನೂನಾದರೆ, ದಂಡನೆಗೆ ಬೆದರಿ ಜನಗಳು ಆ ರೋಗಗಳು ತಗಲಿಕೊಳ್ಳದಂತೆ ಜಾಗರೂಕರಾಗಲೂ ಯತ್ನಿಸುವರು.

II

**ವ್ಯಕ್ತಿಗತವಾದ ರೋಗನಿವಾರಣೋಪಾಯಗಳು.** ಯಾರಿಗೆ ಈ ರೋಗಗಳು ತಗಲಿರಬಹುದಾಗಿ ಸಂದೇಹವಿದೆಯೋ ಅಂಥವ

ರೊಡನೆ ಸಂಗ ಬೆಳೆಸಬಾರದು. ಆ ರೋಗಗಳು ತಗಲಿರುವುದರ ಕೆಲವು ಲಕ್ಷಣಗಳು ಯಾವುವೆಂದರೆ, – ಜನನೇಂದ್ರಿಯದಿಂದ ಕೀವು ಅಥವಾ ಇತರ ದ್ರವ ಇಳಿಯುವುದು, ಹುಣ್ಣುಗಳಿರುವುದು, ತೊಡೆ ಸಂದಿನಲ್ಲಿ ಗಂಟಲ ಹೊರಭಾಗದಲ್ಲಿ ಅಥವಾ ಮೊಳ ಕೈ ಬಳಿಯಲ್ಲಿ ಚಿಕ್ಕ ಗುಂಡು ಗಳಷ್ಟು ದೊಡ್ಡದಾಗಿ ಗುಡ್ಡುಗಳು ಬಾತುಕೊಳ್ಳುವುದು; ಹಣೆ, ಬೆನ್ನು, ಎದೆ, ಉದರ ಇವುಗಳ ಚರ್ಮದ ಮೇಲೆ ತಾಮ್ರವರ್ಣದ ಸಂಶಯ ದೋರುವ ಕಲೆಗಳಿರುವುದು; ತುಟಿಗಳಮೇಲೆ ಬಿಳೀ ಕಲೆಗಳು; ಅಂಗೈಯ ಮೇಲೆ ಲೂತಿ; ಉಗುರುಗಳು ರೋಗಹಿಡಿದಂತೆ ತೋರುವುದು.

ಜನನೇಂದ್ರಿಯದ ರೋಗವುಳ್ಳ ಹೆಂಗುಸಿನೊಡನೆ ಮೊದಲನೆ ಸಲ ಅಥವಾ ಎರಡನೆಸಲ ಸಂಭೋಗಿಸಿದವರಿಗೆ ಅಂಟು ತಗಲದೆ ನಂತರ ಸಂಭೋಗಿಸುವವರಿಗೆ ಮಾತ್ರ ತಗಲುತ್ತದೆ ಎಂಬ ಕಲ್ಪನೆಯು ಕೆಲವರ ಲ್ಲಿದೆ. ಅದು ತಪ್ಪು ತಿಳುವಳಿಕೆಯಾಗಿದೆ ರೋಗದ ಅಂಟು ತಗಲ ಬೇಕಾದರೆ ರೋಗವುಳ್ಳ ಶರೀರಭಾಗವು ನಿರೋಗಿಯ ಶರೀರಕ್ಕೆ ತಗಲ ಬೇಕಾಗುವುದು. ಸಂಭೋಗಿಸಿದರೂ ಸ್ತ್ರೀಯ ಜನನೇಂದ್ರಿಯದ ರೋಗ ಸ್ಥಾನವು ಸೋಂಕದಿದ್ದರೆ ಅಂಟು ತಗಲದಿರಬಹುದು. ರೋಗಜಂತು ವುಳ್ಳ ಕೀವು ಒಮ್ಮೊಮ್ಮೆ ರೋಗಿಣಿಯ ಜನನೇಂದ್ರಿಯದಲ್ಲಿ ಇಲ್ಲ ವಾಗಿರಬಹುದು. ಒಂದೆರಡು ಸಂಭೋಗಗಳ ಘರ್ಷಣದಿಂದ ಕೀವು ಹೊರಗೆ ಬರಲಾರಂಭಿಸಿ ನಂತರ ಭೋಗಿಸಿದವರಿಗೆ ಅಂಟು ಹತ್ತಬಹುದು. ಆದರೆ ಈ ಪರಿಸ್ಥಿತಿಯು ಎಲ್ಲ ರೋಗಿಣಿಯರಲ್ಲಿಯೂ ಇರುವುದೆಂದು ಹೇಳಲ್ಲಾಗದು. ಆದ್ದರಿಂದ ಮೊದಲನೆ ಸಲದ ಸಂಯೋಗವು ನಿರ ಪಾಯಕಾರಿಯಾದುದೆಂದು ಭ್ರಮಿಸುವುದು ಬೇಡ.

ಹೆಂಗಸಾಗಲಿ ಗಂಡಸಾಗಲಿ ತಮ್ಮ ತಮ್ಮ ಜನನೇಂದ್ರಿಯಗಳನ್ನು ಅತಿ ನಿರ್ಮಲವಾಗಿಟ್ಟುಕೊಳ್ಳುವುದು ಎಲ್ಲದಕ್ಕೂ ಪ್ರಧಾನವಾದ ರೋಗ ನಿವಾರಣೋಪಾಯವಾಗಿದೆ. ಲಿಂಗದ (ಶಿಶ್ನ) ಮೇಲ್ಚರ್ಮದೊಳಗೆ ದಿನೇ ದಿನೇ ಕೂಡುವ ದ್ರವವನ್ನು ಬೆಚ್ಚಗಾದ ನೀರಿನಿಂದ ಸಾಬೂನು ಹಚ್ಚಿ ಯಾವಾಗಲೂ ತೊಳೆಯತಕ್ಕುದು. ಇಲ್ಲವಾದರೆ ಅದು ಕೊಳೆತು, ಅಲ್ಲಿ ಬಾತುಕೊಳ್ಳಬಹುದಾದ ಕಾರಣ, ಅಂಥ ಸಂದರ್ಭದಲ್ಲಿ ಅಂಟು ತಗಲಲು

ತುಂಬಾ ಆಸ್ಪದವಾಗುತ್ತಿದೆ ಖತ್ನಾ (circumcision) ಮಾಡುವ ಸಂದರ್ಭದಿಂದ ಈ ಮೇಲ್ಚರ್ಮವು ಕತ್ತರಿಸಲ್ಪಡುವ ಕಾರಣ, ದ್ರವವು ಶೇಖರವಾಗದೆ, ಆ ಅವಯುವವು ಗಟ್ಟಿಯಾಗಿ, ದಪ್ಪವಾಗಿ ಇರುವುದರಿಂದ ಅಷ್ಟು ಸುಲಭವಾಗಿ ಅಂಟನ್ನು ಹಿಡಿದುಕೊಳ್ಳಲಾರದು. ಖತ್ನಾ ಮಾಡುವುದರಿಂದ ಸಾಧಾರಣವಾಗಿ ಫರೆಂಗಿ ರೋಗವು ತಟ್ಟದಂತೆ ಸಾಧಿಸಿದಂತಾಗುತ್ತಿದೆ. ಆದರೆ ಮೇಹ ರೋಗದಿಂದ ತಪ್ಪಿಸಿಕೊಳ್ಳುವುದಕ್ಕೆ ಮಾತ್ರ ಇದರಿಂದಾಗದು. ಖತ್ನಾ ಮಾಡಲ್ಪಟ್ಟ ಜನಾಂಗದವರಲ್ಲಿ ಈ ರೀತಿ ರೋಗನಿವಾರಣೋಪಾಯವಿದ್ದೇ ಇರುವುದೆಂದು ಖಾನೇಸುಮಾರಿಯಿಂದ ಗೊತ್ತುಹಚ್ಚಲಾಗಿದೆ. ಆದರೆ, ಪ್ರಪಂಚದಲ್ಲಿರುವ ಯಾವತ್ತು ಗಂಡಸರು ಶಸ್ತ್ರಪ್ರಯೋಗಕ್ಕೆ ಒಳಪಡದಿರುವ ಕಾರಣ, ಲಿಂಗದ ಮೇಲ್ಪರೆಯ ಒಳಭಾಗವನ್ನು ಅನುದಿನವೂ ನಿರ್ಮಲವಾಗುವಂತೆ ತೊಳೆವುದು ಅತ್ಯಾವಶ್ಯಕವಾಗಿದೆಂದು ಹೇಳಬೇಕಾಗಿದೆ. ಹೆಂಗುಸರಲ್ಲಾದರೆ,ದಿನಂಪ್ರತಿಯೂ ಜನನೇಂದ್ರಿಯದ ಹೊರಭಾಗಗಳನ್ನೂ ಒಳಭಾಗಗಳನ್ನೂ ಯುಕ್ತವಾದ ರೀತಿಯಲ್ಲಿ ತೊಳೆದು ಚೊಕ್ಕಟವಾಗಿರಿಸುವುದು ಅತಿ ಮಹತ್ವದ ಸಾಧನೆಯಾಗಿದೆ. ಸಂಗಕಾರ್ಯವು ಮುಗಿದ ಬಳಿಕ, ಆ ಅವಯುವಗಳನ್ನು ಸಾಬೂನು ಹಚ್ಚಿ ನೀರಿನಿಂದ ಸರಿಯಾಗಿ ತೊಳೆದುಕೊಳ್ಳುವುದು ಅತಿ ಅಗತ್ಯವುಳ್ಳದ್ದು; ಯಾಕೆಂದರೆ,– ರೋಗದ ಅಂಟು ಸಾಮಾನ್ಯವಾಗಿ ಇದರಿಂದ ತೊಳೆದುಹೋಗುವುದು. ಮೂತ್ರಶಂಕೆ ಮಾಡುವದರಿಂದಲೂ ಇದೇ ರೀತಿಯ ಪರಿಣಾಮವುಂಟಾಗುವುದು,—ಏಕೆಂದರೆ ಮೇಹರೋಗದ ಕೀವು ಆಗಲೆ ಮೂತ್ರನಾಳಗಳೊಳಗಿಂದ ಹರಿದು ಹೊರಬೀಳುವುದು. ಸಂಗವಾಗುವ ಮೊದಲೂ ನಂತರವೂ ನಿರ್ಮಲವಾಗಿ ಜನನೇಂದ್ರಿಯಗಳನ್ನು ತೊಳೆದುಕೊಂಡು, ಸಂಗವಾದ ಕೂಡಲೆ ಮೂತ್ರಶಂಕೆ ಮಾಡಿದ್ದಲ್ಲಿ, ರೋಗಬೀಜಗಳೊಂದೂ ಉಳಿಯದೆ ತೊಳೆದುಹೋದುದರ ಎಷ್ಟೋ ಉದಾಹರಣೆಗಳಿವೆ. ಇವೆರಡು ಸಾಧನೆಗಳು ರೋಗನಿರೋಧಕ್ಕೆ ಕೊಂಚ ಸಹಾಯಕವಾಗಬಹುದೇ ಹೊರತು ಅವುಗಳನ್ನೆ ಪೂರ್ಣವಾಗಿ ನಂಬಿಕೊಂಡಿರುವುದು ಹುಚ್ಚುತನವಾದೀತು. ಏಕೆಂದರೆ ರೋಗದ ಅಂಟು ಜನನೇಂದ್ರಿಯದ ಯಾವ ಭಾಗಕ್ಕೆ ತಗಲುತ್ತದೆಂದು

ನಿಶ್ಚಿತವಾಗಿ ಹೇಳಲು ಬರುವಂತಿಲ್ಲ. ಮೂತ್ರ ಮಾರ್ಗದ ಒಳಗಡೆ ಯಲ್ಲಿ ಅಂಟು ತಗಲಿದ್ದರೆ ಮೂತ್ರ ವಿಸರ್ಜನದಿಂದ ಸ್ವಲ್ಪ ರೋಗ ನಿವಾರಣೆಗೆ ಸಹಾಯವಾಗಬಹುದು. ಆದರೆ ಶಿಶ್ನದ ಹೊರ ಮೈಗೆ ಅಥವಾ ಮಣಿ ಮೇಲ್ಭಾಗಕ್ಕೆ ಅಥವಾ ಮುಂದೊಗಲಿನ ಒಳಭಾಗಕ್ಕೆ ತಗಲಿದ ಸೋಂಕು ಮೂತ್ರ ವಿಸರ್ಜನದಿಂದ ದೂರವಾಗಲಾರದು. ಗಂಡುಸಿನಿಂದ ತಗಲಿಸಿಕೊಂಡ ರೋಗದ ಅಂಟು ಹೆಂಗುಸಿಗೆ ಯೋನಿ ಯಲ್ಲಿರುವುದು. ಅವಳು ಮೂತ್ರ ವಿಸರ್ಜನದಿಂದ ತನ್ನ ಅಂಟನ್ನು ಪರಿಹರಿಸಿಕೊಳ್ಳಲಾರಳು. ಏಕೆಂದರೆ ಅವಳ ಮೂತ್ರ ಮಾರ್ಗವು ಯೋನಿಯಿಂದ ಬೇರೆಯಾಗಿರುವುದು.

**ಇತರ ಯುಕ್ತ ಸಾಧನೆಗಳು.** ಇದಲ್ಲದೆ,— ಇನ್ನು ಉಪ ಯುಕ್ತ ಸುಪರಿಣಾಮವುಳ್ಳ ಸಾಧನೆಯೆಂದರೆ ರಬ್ಬರಿನ ಚೀಲ. ಇದು ರಬ್ಬರಿನ ಅಥವಾ ಅದಕ್ಕಿಂತಲೂ ತೆಳುವಾದ ಪದಾರ್ಥದಿಂದ ಮಾಡಿರುವ ಚೀಲವಾಗಿದೆ. ರಬ್ಬರಿನ ಚೀಲದಿಂದ ಇಂದ್ರಿಯದ ಸ್ಪರ್ಶಶಕ್ತಿಯು ಕುಂದುವುದು; ಏಕೆಂದರೆ ರಬ್ಬರು ದಪ್ಪನಾಗಿದೆ; ಅದರೆ ಅದು ವಿಶ್ವಾಸ ಯೋಗ್ಯವೂ ಭದ್ರವೂ ಆಗಿದೆ. ಜನನೇಂದ್ರಿಯ ದ್ವಾರಾ ಅಂಟು ತಗಲದಂತೆ ಫರಂಗಿರೋಗವಾಗಲಿ ಮೇಹರೋಗವಾಗಲಿ ತಟ್ಟದಂತೆ ಈ ರಬ್ಬರು ಚೀಲವು ಕಾಪಾಡುತ್ತಿದೆ. ಅದರ ಉಪಯೋಗವು ಮುಗಿದ ಬಳಿಕ ಅದನ್ನು ಜಾಗ್ರತೆಯಿಂದ ಬಿಡಿಸಿತೆಗೆದು ಅದರ ಹೊರಮೈಗೆ ತಗಲಿರಬಹುದಾದ ಎಂಥ ಅಂಟು ದ್ರವಗಳಾದರೂ ಉಪಯೋಗಿಸಿದವರ ಇಂದ್ರಿಯಗಳಿಗೆ ತಟ್ಟದಂತೆ ಎಚ್ಚರವಿಟ್ಟುಕೊಳ್ಳಬೇಕಾಗಿದೆ. ಈ ರಬ್ಬರು ಚೀಲವನ್ನು ಗಂಡಸರು ಮಾತ್ರವೆ ಉಪಯೋಗಿಸಬಹುದಾಗಿದೆ; ಆದರೆ ಹೆಂಗಸಿಗೂ ಆ ಗಂಡಸಿನಿಂದ ಮೇಹರೋಗವಾಗಲಿ ಹೆಚ್ಚು ಕಡಿಮೆ ಸಾಧಾರಣವಾಗಿ ಫರಂಗಿ ರೋಗವಾಗಲಿ ತಟ್ಟದಂತೆ ಅದು ಕಾಪಾಡುವು ದೆನ್ನಬೇಕಾಗಿದೆ ಆದರೆ ಈ ವಿಷಯದಲ್ಲಿ ಒಂದು ಪ್ರಮಾದದ ಬಗ್ಗೆ ಎಚ್ಚರಾಗಿರಬೇಕಾಗಿದೆ. ಚರ್ಮಚೀಲಗಳು ಎಷ್ಟೋ ಸಲ ಅತಿ ಸೂಕ್ಷ್ಮ ರಂಧ್ರವುಳ್ಳವಾಗಿರುವವು ಒಮ್ಮೊಮ್ಮೆ ಸಂಭೋಗಕಾಲದಲ್ಲಿ ಅವಕ್ಕೆ ರಂಧ್ರ ಬೀಳುವುದುಂಟು. ರೋಗ ಜಂತುಗಳು ಆ ರಂಧ್ರಗಳಿಗಿಂತ ಅತಿ

ಸೂಕ್ಷ್ಮವಾಗಿರುವುದರಿಂದ ಅವು ತೂರಿಕೊಂಡು ಹೊರಬಂದು ರೋಗವನ್ನು ಅಂಟಿಸಬಹುದು. ಆದ್ದರಿಂದ ಉಪಯೋಗಿಸುವ ಮೊದಲು ಚೀಲವನ್ನು ಚೆನ್ನಾಗಿ ಜಗ್ಗಿ ಭೂತಗನ್ನಡಿಯಿಂದ ಪರೀಕ್ಷಿಸಿ ರಂಧ್ರಗಳಿಲ್ಲವೆಂಬುದರ ಮನವರಿಕೆ ಮಾಡಿಕೊಳ್ಳಬೇಕು. ಮತ್ತು ಇಮ್ಮಡಿ ಸಂರಕ್ಷಣೆಯಿಂದ ಚೀಲದ ಒಳ-ಹೊರ ಮೈಗಳಿಗೆ ಮುಂದೆ 4ನೆ ಉಪಾಯದಲ್ಲಿ ವರ್ಣಿಸಲ್ಪಟ್ಟ ಕೆಲೊಮೆಲ್ಲಿನ ಮುಲಮನ್ನು ಲೇಪಿಸಬೇಕು.

2. ರಜತಲವಣಗಳಲ್ಲಿ ಕೆಲವನ್ನು ಸಂಗವಾದ ಬಳಿಕ ಮೂತ್ರನಾಳದಲ್ಲಿ ಪ್ರವೇಶಗೊಳಿಸಿ ಮೂತ್ರ ಹೊಯ್ಯುವುದರಿಂದ ಮೇಹದ ಪೀಡೆಯು ತಗಲದಂತೆ ಮಾಡಿದಂತಾಗುವುದು ಆದರೆ ಈ ಔಷಧಿಗಳು ರಬ್ಬರು ಚೀಲದಷ್ಟು ಭರವಸೆಯ ವಿಷಯಗಳಲ್ಲ. ಅದೂ ಅಲ್ಲದೆ,—ಈ ತೆರದಲ್ಲಿ ಆಗಾಗ ಔಷಧಿಗಳನ್ನು ಪ್ರಯೋಗಿಸುವುದರಿಂದ ಅದೇ ಬಾಧಕಕರವಾಗಿ ಪರಿಣಮಿಸುವುದು ಮಾತ್ರವಲ್ಲದೆ, ಕೆಲವೇಳೆ ಶಿಶ್ನವು ಬಾತುಕೊಳ್ಳುವ ಕಾರಣ ಅಂಟುರೋಗವು ಇನ್ನೂ ತಗಲಲು ಅನುಕೂಲವಾಗುವುದು.

3. ರೋಗಬೀಜಗಳನ್ನು ನಾಶಪಡಿಸುವಂಥ ದ್ರವಗಳಿಂದ ತೊಳೆವ ಸಾಧನ. ಸಂಗ ಮಾಡಿದ ಕೂಡಲೆ ಮತ್ತು ಮೊದಲೆ ಶಿಶ್ನವನ್ನು ಇಂಥ ಬಗೆಯ ಎರಡರೆ (Lysol or permanganate of potash solution) ಲೈಸೊಲ್ ಅಥವಾ ಪರ್ಮೆಂಗನೇಟ್ ಒಫ್ ಪ್ರೊಟೆಶ್‍ದ ನೀರಿನಿಂದ ತೊಳೆವುದೂ, ಯೋನಿಯನ್ನು ಅವೇ ಔಷಧಿಗಳಿಂ ಚೆನ್ನಾಗಿ ಒಳಭಾಗದಲ್ಲೆಲ್ಲ ಶುದ್ಧಗೊಳಿಸುವುದೂ ರೋಗಾಣುಗಳು ತಟ್ಟದಂತೆ ಒಂದು ಪ್ರಬಲವಾದ ಸಾಧನೆ. ಸಾಬೂನು ಹಚ್ಚಿ ನೀರಿನಿಂದ ತೊಳೆವುದಕ್ಕಿಂತಲೂ ಈ ಪ್ರಯೋಗವು ಉತ್ತಮವಾಗಿದೆ.

4. ಶಿಶ್ನವನ್ನು ಸಂಗ ಮಾಡುವ ಮೊದಲೂ ಮತ್ತೆಯೂ, ವೆಸಲೀನ್ (Vaseline)ಎಂಬ ಒಂದು ತೆರದ ಸಾಮಾನ್ಯ ಚರ್ಬಿ ಪದಾರ್ಥದಿಂದ ಚೆನ್ನಾಗಿ ಸಂಪೂರ್ಣವಾಗಿ ಸವರಿದರೆ, ಆದರಲ್ಲೂ ವೆಸಲೀನಿಗಿಂತಲೂ ಬೊರೆಸಿಕ್ ವೆಸಲೀನಿನಂಥ (Boracic vaselin) ಇನ್ನೂ ರೋಗ

ನಿವಾರಕ ಲೇಪಗಳಿಂದ, ಅಥವಾ, ನೂರಕ್ಕೆ 30 ಪಾಲು ಕೆಲೊಮೆಲ್ಲಿನ ಅಂಜನದಿಂದ (30%calomel ointment) ತಿಕ್ಕಿದರೆ, ಫರೆಂಗಿ ರೋಗವು ತಟ್ಟದ ಹಾಗೆ ಜಾಗ್ರತೆ ತೆಗೆದುಕೊಂಡಂತಾಗುವುದೆಂದು ಎಷ್ಟೋ ಕಾಲದಿಂದ ಚಿಕಿತ್ಸಕರು ಹೇಳುತಿದ್ದಾರೆ. ಶಿಶ್ನವನ್ನು ದಪ್ಪನಾಗಿ ಚರ್ಬಿ ಪದಾರ್ಥದಿಂದ ಲೇಪಿಸಿದರೆ, ಅದರ ಚರ್ಮಕ್ಕೆ ರೋಗದ ಅಂಟು ತಗಲದ ಹಾಗೆ ಪ್ರಯತ್ನ ಮಾಡಿದಂತಾಗುವುದು; ಆದರೆ ಸಂಗಕಾಲದಲ್ಲಿ ಅದೆಲ್ಲವೂ ಉಜ್ಜಿ ಹೋದರೆ ಪ್ರಯೋಜನವು ಅಷ್ಟಿರಲಾರದು. ಮೆಚಿನ್ಕೊಫ್ ಎಂಬ ಪ್ರಸಿದ್ಧ ವೈದ್ಯನು,—ನೂರಕ್ಕೆ ಮೂವತ್ತು ಪಾಲು ಕೆಲೊಮೆಲ್ಲನ್ನು ಹಾಕಿದ ಲೇಪದಿಂದ, ಸಂಶಯಗೊಂಡ ಸಂಗ ಕಾಲದಲ್ಲಿ, ನಾಲ್ಕೈದು ಮಿನಿಟುಗಳ ತನಕ ಶಿಶ್ನವನ್ನು ಚೆನ್ನಾಗಿ ತಿಕ್ಕಿ ಲೇಪಿಸಿದರೆ, ಆ ಸ್ಥಾನದಲ್ಲಿ ತಗಲಿರಬಹುದಾದ ಫರಂಗಿ ರೋಗದ ಎಂಥ ಅಂಟಾದರೂ ಅವನಿಗೆ ತಗಲಲಾರದೆಂದು ಅಭಿಪ್ರಾಯ ಹೇಳಿರುವನು. ಇದನ್ನು ಮಾತ್ರ, ಸಂಗವಾದ ಕೂಡಲೆ, ಅಥವಾ ಆದಾದ ಅತಿಕಡಿಮೆ ಹೊತ್ತಿನಲ್ಲೇ, ತಗಲಿಸಬೇಕಾಗಿದೆ.

ಮೇಲೆ ಹೇಳಿದ ಯಾವತರದ ಲೇಪವನ್ನಾದರೂ ತಗಲಿಸುವಾಗ, ಅದು ಜನನೇಂದ್ರಿಯದ ಯಾವತ್ತೂ ಭಾಗಗಳಿಗೆ ಸರಿಯಾಗಿ ತಗಲಿರುವಂತೆ ಹಚ್ಚಲು ಜಾಗ್ರತೆಯಿರಬೇಕಾಗಿದೆ. ಮೇಲ್ಚರ್ಮದ ಪರೆಯನ್ನು ಆದಷ್ಟು ಹಿಂದಕ್ಕೆ ಸೆಳೆದೆಳೆದು, ಅದರೊಳಗಣ ಹಾಗೂ ಹೊರಗಣ ಯಾವತ್ತೂ ಚರ್ಮವನ್ನು ಚೆನ್ನಾಗಿ ಲೇಪಿಸತಕ್ಕದು. ಅದಲ್ಲದೆ, ಶಿಶ್ನರಂಧ್ರ ದ್ವಾರವನ್ನು ತುಂಬಾ ಕೊಬ್ಬಿನಿಂದ ಮುಚ್ಚಬೇಕಾಗಿದೆ. ಸಂಗವಾದ ಕೂಡಲೆ. ಆ ಅವಯವ ಭಾಗಗಳನ್ನು ಸಾಬೂನು ಹಚ್ಚಿ ನೀರಿನಿಂದ ನಿರ್ಮಲವಾಗಿ ತೊಳೆಯಬೇಕಾಗಿದೆ ಅನಂತರದಲ್ಲಿ, ರೋಗಬೀಜ ಧ್ವಂಸಕರಗಳಾದ ಪೊಟೆಸಿಯಮ್ ಪರ್‌ಮೇಂಗನೇಟಿನ ದ್ರವದಿಂದ ಅಥವಾ ಲಿಸ್ಟರೀನಿನಿಂದ ತೊಳೆಯತಕ್ಕದು ಲೇಪ ಹಚ್ಚಿದ ಹಾಗೂ ತೊಳೆದ ಸಾಂಗತೆಯ ಮೇಲೆಯೇ ರೋಗ ಬೀಜಗಳ ಅಂಟಿನ ನಿವಾರಣೆಯು ಆದರಿಸಿರುವುದು. ಹೆಂಗುಸರ ಯೋನಿಯು ಮಡಚಿದ ಪರೆಗಳುಳ್ಳದಾದ ಕಾರಣ, ಅದರ ಎಡೆಯೆಡೆಗಳಲ್ಲೆಲ್ಲ ಲೇಪವೂ ನೀರೂ ಸರಿಯಾಗಿ ಸಂಪೂರ್ಣವಾಗಿ

ತಗಲುವ ಹಾಗೆ ವಿಶೇಷವಾದ ಜಾಗರೂಕತೆಯು ಅವಶ್ಯವಾಗಿದೆ. ಪರ್ ಮೇಂಗನೇಟಿನ ಕೆಲ ಹರಳುಗಳನ್ನು ಕರಗಿಸಿದ ನೀರನ್ನು ಸಂಗವಾದ ಕೂಡಲೆ ಪಿಚಕಾರಿಯಿಂದ ತನ್ನ ಯೋನಿಯೊಳಕ್ಕೆ ತೊಳೆವಂತೆ ಹರಿಯ ಗೊಡುವುದು ಪ್ರತಿ ಹೆಂಗುಸಿಗೂ ಉತ್ತಮವಾಗಿದೆ. [ಈ ಔಷಧಿಯು (Potassium permanganate) ಅತಿ ಕಡಿಮೆ ಕ್ರಯಕ್ಕೆ ದೊರೆ ವುದು; ಯಾವನೊಬ್ಬ ಇಂಗ್ಲಿಷ್ ಔಷಧ ವ್ಯಾಪಾರಿಯಲ್ಲಿಯೂ (chemist) ಸಿಗುವುದು: ಇದು ಒಣ ಹರಳುಗಳಾಗಿ ಸಿಗುವುದು ಒಂದು ಚಿಮಿಟ ಹರಳುಗಳನ್ನು ಸಣ್ಣ ಚಾ ತಟ್ಟೆಯ ನೀರಲ್ಲಿ ಕರಗಿಸಿದರೆ ಸಾಕಾಗುವುದು.]



# III

## ವೈದ್ಯಕೀಯ ಚಿಕಿತ್ಸೋಪಾಯ

ಜನನೇಂದ್ರಿಯಗಳ ರೋಗಗಳನ್ನು ನಿವಾರಿಸಲೂ ಕುಂದಿಸಲೂ, ಆ ರೋಗಗಳಿಂದ ಪೀಡಿತರಾದವರನ್ನು ಆದಷ್ಟು ತ್ವರ್ಯದಲ್ಲಿ ಆದಷ್ಟು ಪೂರ್ಣವಾಗಿ ವೈದ್ಯಕೀಯ ಉಪಚಾರಗಳಿಂದ ಗುಣಪಡಿಸುವುದೇ ಅತಿ ಮಹತ್ವದ ಮೂರನೆಯ ಸಾಧನೋಪಾಯವಾಗಿರುವುದು ಯಾವ ನೊಬ್ಬ ರೋಗಿಯು ಈ ರೋಗಬಾಧೆಯನ್ನು ಅಂತರಂಗದಲ್ಲಿ ಬಚ್ಚಿಟ್ಟು ಕೊಂಡು ತನಗೆ ತಾನೆ ಔಷಧೋಪಚಾರ ಮಾಡಿಕೊಳ್ಳುತ್ತಿರುವುದು ಯೋಗ್ಯವಾದುದಲ್ಲ. ಆತನು ಕೂಡಲೇ ಯೋಗ್ಯ ಪ್ರವೀಣ ವೈದ್ಯ ನಲ್ಲಿಗೆ ತೆರಳಿ ತನ್ನ ರೋಗದ ವಿಷಯವಾಗಿ ಎಲ್ಲ ವಿವರವನ್ನೂ ತಿಳಿಸಿ, ಸಂಪೂರ್ಣವಾಗಿ ಗುಣಹೊಂದುವ ತನಕ ಚಿಕಿತ್ಸೆ ಪಡೆಯುತ್ತಲೇ ಇರ ಬೇಕಾಗಿದೆ. ಬಡರೋಗಿಗಳಿಗೆ ಧರ್ಮಾರ್ಥವಾಗಿ ಔಷಧೋಪಚಾರವು ಸಿಗಬೇಕು. ನೊರ್ವೆ ಸ್ವಿಡನ್ ದೇಶಗಳ ಸರಕಾರಗಳು ಸರಿಯಾದ ಕ್ರಮದಲ್ಲಿ ಈ ರೋಗಿಗಳಿಗೆಲ್ಲ ಸರಕಾರದ ವ್ಯಯದಿಂದಲೇ ಚಿಕಿತ್ಸೆ ಮಾಡುವರಾದ ಕಾರಣ, ಇನ್ನು ಅಲ್ಲಿ ಈ ರೋಗಬಾಧೆಯು ತೀರ ಕುಂದಿಬರಲು ಕಾರಣವಾಗಿರುವುದು.

ಪಾದರಸವು ಫರಂಗೀ ರೋಗಕ್ಕೆ ಅತ್ಯುತ್ತಮವಾದ ಔಷಧ ವಾಗಿದೆಯಾದರೂ, ಪ್ರವೀಣ ಜ್ಞಾನಿಗಳಲ್ಲದ ವೈದ್ಯರ ಕೈಯಲ್ಲಿ ಅದೇ ತೀಕ್ಷ್ಣ ವಿಷವಾಗಿ ಪರಿಣಮಿಸುವುದು. ಡಾಕ್ಟರರು ಫರಂಗೀ ರೋಗಕ್ಕೆ ಒಂದನ್ನೊಂದು ಇಂಜೆಕ್ಷನಿನ ಮೂಲಕ ಚಿಕಿತ್ಸೆ ಮಾಡುವರು. ರೋಗವು ಸಂಪೂರ್ಣವಾಗಿ ಕಿತ್ತು ಹೋಗಬೇಕಾದರೆ ಕೆಲವೇಳೆ ಬಹಳ ಚಿಕಿತ್ಸೆ ನಡೆಯಬೇಕಾಗುವುದು. ಆದರೆ ಇತ್ತೀಚೆ ವೈದ್ಯ ಪ್ರಪಂಚದಲ್ಲಿ ಪಾದರಸದ ಸ್ಥಾನವನ್ನು ಶಂಖಪಾಷಾಣ (Arsenic)ವು ಆಕ್ರ ಮಿಸುತ್ತಿದೆ. ಪಾಶ್ಚಾತ್ಯ ದೇಶದ ಸ್ಟಾಲ್ವರ್‌ಸ್ಟಾನ್ ಎಂಬ ಸುಪ್ರಸಿದ್ಧ ಶಂಖಪಾಷಾಣದ ಇಂಜೆಕ್ಷನ್ ಫರಂಗಿ ರೋಗಕ್ಕೆ ಅದ್ಭುತ ಗುಣಕಾರಿ ಯಾಗಿ ಪರಿಣಮಿಸಿದೆ. ಅದೇ ಔಷಧವು ಈಗ ಭಾರತದಲ್ಲಿಯೂ ಥಾಯೊ

ಸ್ಪಾರ್ಸ್ಮಿನಸ್, ಥಯಾರ್ಸಿನ್ ಮುಂತಾದ ಹೆಸರುಗಳಿಂದ ಸಿದ್ಧವಾಗುತ್ತಿದೆ. ಒಳ್ಳೇ ಗುಣಕಾರಿಯೂ ಇದೆ ಉಪದಂಶವು ಅಂಟಿದೊಡನೆ ತಜ್ಞರಿಂದ ಚಿಕಿತ್ಸೆ ನಡೆದರೆ ಒಂದೆರಡು ವಾರಗಳಲ್ಲಿಯೆ ರೋಗವು ನಿರ್ಮೂಲವಾಗುವುದು ರೋಗವು ಹಳೆಯದಾದ ನಂತರವೂ ತಿಂಗಳುಗಟ್ಲೆ ಸರಿಯಾದ ಚಿಕಿತ್ಸೆಯಿಂದ ಪೂರ್ಣವಾಗಿ ಗುಣಪಡುವುದು ಸಾಧ್ಯವಿದೆ. ಉಪದಂಶವು ಎಂದೂ ನಿರ್ಮೂಲವಾಗದೆಂಬ ಹಳೆಯ ಭಾವನೆಯು ಈಗ ಹೋಗ ಬೇಕಾಗಿದೆ.

ಮೇಹ ರೋಗವು ಅಷ್ಟೊಂದು ದೊಡ್ಡ ರೋಗವಲ್ಲವೆಂದು ಎಷ್ಟೋ ಸಲ ರೋಗಿಗಳು ಅದಕ್ಕೆ ಗಣ್ಯಮಾಡದೆ ಇರುವವರಾಗಿದ್ದಾರೆ. ಅದು ಹುಟ್ಟಿದ ಕೂಡಲೆ ಅದರ ಲಕ್ಷ್ಯವನ್ನೆ ಮಾಡುವುದಿಲ್ಲ. ಅದು ಪ್ರಾರಂಭವಾದ ಕೂಡಲೆ ಅದಕ್ಕೆ ಚಿಕಿತ್ಸೆ ನಡೆಸದಿದ್ದರೆ, ಅದರ ಬೀಜವು ಮೂತ್ರನಾಳದ ದ್ವಾರಾ ಮುಂದಕ್ಕೆ ಹರಡಿ, ನಾನಾ ತೆರದ ಉಪ ರೋಗಗಳನ್ನು ಉಂಟು ಮಾಡುವುದು. ಹಾಗಾದ ಬಳಿಕ, ಅತಿ ಚತುರನಾದ ವೈದ್ಯನನ್ನಾದರೂ ಅದು ಬಹುಕಾಲ ಇದಿರಾಡುವುದು ಬಹು ವರುಷಗಳ ತನಕ ಬಾಧಿಸುವುದು ಮಾತ್ರವಲ್ಲದೆ, ಅದು ಬಹು ಕಾಲದ ತನಕ ಅಂಟು ಹರಡಿಸಲೂ ಶಕ್ತಿಯುಳ್ಳದ್ದಾಗಿದೆ ಹೆಂಗು ಸರಲ್ಲಿ ಈ ರೋಗವನ್ನು ಗುಣಪಡಿಸುವುದು ತೀರ ಕಷ್ಟಸಾಧ್ಯವು; ಅದರ ಪರಿಣಾಮುಗಳೂ ಇನ್ನಷ್ಟು ಹಾನಿಕರವಾದುವು. ಆದುದರಿಂದ ಈ ರೋಗವನ್ನು ಅದರ ಮೊಳಿಕೆಯಲ್ಲಿಯೆ ಕೀಳುವುದು ಅತಿ ಅಗತ್ಯ ವಾಗಿದೆ; ಏಕೆಂದರೆ ಆ ಸ್ಥಿತಿಯಲ್ಲಿರುವಾಗ ಅದನ್ನು ಸಹಜವಾಗ್ಯೇ ಗುಣ ಪಡಿಸಲಾಗುತ್ತಿದೆ. ಮೊದಲು ಮೇಹರೋಗಕ್ಕೆ ನಿಷ್ಕ್ರಿಯಗೊಳಿ ಸಲ್ಪಟ್ಟ ಮೇಹ ಜಂತುಗಳನ್ನೆ ಇಂಜೆಕ್ಷನ್ ಕೆವಿುಸ್ಟು ಚಿಕಿತ್ಸೆ ನಡೆಸು ತ್ತಿದ್ದರು. ಈಗ ಸಲ್ಫಾನಾಮಾಯ್ಡ್ ಎಂಬ ಒಳ್ಳೇ ಬಲಿಷ್ಠವಾದ ಔಷಧವು ಶೋಧಿಸಲ್ಪಟ್ಟಿದೆ. ಅದರಿಂದ ಮೇಹವು ಚಮತ್ಕಾರಿಕವಾಗಿ ಬಹು ಬೇಗನೆ ಗುಣವಾಗುವುದು ಆದರೆ ಆ ಔಷಧದಿಂದ ಹೃದಯ, ವೃಕ್ಕ (Kidney) ಗಳ ಮೇಲೆ ದುಷ್ಪರಿಣಾಮುವಾಗುವುದುಂಟು. ಆದ್ದರಿಂದ ವೈದ್ಯರ ಸಲಹೆಯಿಂದಲೇ ಅದನ್ನು ಉಪಯೋಗಿಸಬೇಕು.



## ಸಕಲ ಪುಸ್ತಕ ಭಂಡಾರಗಳಿಗೆ

## ಬೇಕಾಗುವ ಸರ್ವವಿಧದ ಪುಸ್ತಕಗಳು!

**ಕಥೆ, ಕಾದಂಬರಿ, ನಾಟಕ, ಕವಿತೆ. ಚಿತ್ರ ಪ್ರಬಂಧಾದಿ ನಾನಾ ಬಗೆಯ ಅಮೂಲ್ಯ ಕೃತಿಗಳು!**

**ಅಂತರಂಗದ ಪ್ರಕಟಣೆಗಳು:**

| | | | |
|---|---|---|---|
| ಬಿರುದಾವಳಿ | 0 | 3 | 0 |
| ಹೈದರಾಬಾದ್ ವಿಜಯ | 0 | 4 | 0 |
| ಗಾದೆಯ ಗಾಂಧಿ | 0 | 3 | 0 |
| ಶಾಂತಿಯ ಮಡಲಿನಲ್ಲಿ | 0 | 3 | 0 |
| ಬಲಿಪೀಠದಲ್ಲಿ | 0 | 5 | 0 |
| ಅಗಲಿದ ಅಕ್ಕ ಸರೋಜಿನಿ | 0 | 3 | 0 |
| ನನ್ನ ಹೆಂಡತಿ | 0 | 3 | 0 |
| ಪುಣ್ಯಫಲ | 0 | 4 | 0 |
| ಸುಖದದಾರಿ | 0 | 3 | 0 |
| ಸುಕಾಂತ | 0 | 3 | 0 |
| ಪಂಚಮುಖಿ | 0 | 4 | 0 |
| ಜಾತೀಭೂತಕ್ಕೆ ಬಲಿ | 0 | 3 | 0 |
| ಜನಸೇವೆಯ ಸೋಗಿನಲ್ಲಿ | 0 | 3 | 0 |
| ನಾ ಕಂಡ ಅವಳು | 0 | 3 | 0 |
| ತ್ರಿವೇಣಿ | 0 | 3 | 0 |
| ನಿಲುವಂಗಿ | 0 | 4 | 0 |
| ಬಾಡಿಗೆಯ ಮನೆ | 0 | 3 | 0 |
| ವರ್ತಮಾನಕಾಲದ ನಾಲ್ವರು | | | |
| ಮಹಾನುಭಾವರು | 0 | 4 | 0 |
| ದೇವರ ನಾಮ ಮತ್ತು ಸಾಧನೆ | 0 | 3 | 0 |
| ಎರಡು ಕತೆಗಳು | 0 | 4 | 0 |
| ಸರಸ–ವಿರಸ | 0 | 3 | 0 |
| ಹೃದಯೇಶ್ವರಿ | 0 | 4 | 0 |
| ವಿವಿಧ ವಿಷಯ ಕೋಶ ಭಾಗ ೧,೨ | 0 | 6 | 0 |
| ನುಡಿಮುತ್ತುಗಳು ೧, ೨, ೩ | 0 | 12 | 0 |

| | | | |
|---|---|---|---|
| ಕುಲವಿಲ್ಲದ ಹೆಣ್ಣು | 1 | 8 | 0 |
| ತವರು ಮನೆಯಿಂದ | 0 | 4 | 0 |
| ಭಾಗ್ಯಲಕ್ಷ್ಮಿ | 1 | 4 | 0 |
| ಯುಗವಾಣಿ | 0 | 8 | 0 |
| ಸ್ತ್ರೀ ಹೃದಯ | 0 | 4 | 0 |
| ದ್ವೇಷ | 0 | 3 | 0 |
| ಎರಡು ಏಕಾಂಕ ನಾಟಕಗಳು | 0 | 4 | 0 |
| ಪ್ರಜಾಪ್ರಭುತ್ವವನ್ನು ಕುರಿತು | 0 | 8 | 0 |
| ಕಲಾವಿದನ ದಿನಚರಿ | 0 | 3 | 0 |
| ಆಧುನಿಕ ಭಾರತ | 0 | 4 | 0 |
| ಕಾಲವೇ ಬದಲಾಗಿದೆ | 0 | 4 | 0 |
| ಭಾರತದ ಸಾಹಿತ್ಯ ಕಲೆಗಳು | 0 | 4 | 0 |
| ಸ್ತ್ರೀಸ್ವಾತಂತ್ರ್ಯ ಬೇಕೆ? | 0 | 4 | 0 |
| ಹಂಬಲ | 0 | 4 | 0 |
| ಭಾರತಚಿತ್ರದ ಅಂಚೆಚೀಟುಗಳು | 0 | 3 | 0 |
| ತ್ರಿಶೂಲ | 0 | 5 | 0 |
| ಪುಸ್ತಕಪುರಾಣ | 0 | 4 | 0 |
| ಹಳ್ಳಿಯಲ್ಲಿ ನಡೆದ ನಾಟಕ | 0 | 3 | 0 |
| ನೆರೆಯ ಗಾಂಧಾರ | 0 | 3 | 0 |
| ಮಾತಿನಯುಗದ ಮಹಾಪ್ರಭಾವ | 0 | 3 | 0 |
| ವಿಜ್ಞಾನದ ಬೆಳವಣಿಗೆ | 0 | 4 | 0 |
| ಡಾ। ಹರ್ಡೀಕರ್ | 0 | 5 | 0 |
| ತೆಂಗಿನ ತವರು | 0 | 6 | 0 |
| ಪ್ರಾಯಶ್ಚಿತ್ತ | 0 | 3 | 0 |
| ಪ್ರಭಾ | 0 | 3 | 0 |
| ಶವಗಳ ಸಾಗಾಟ | 0 | 12 | 0 |
| ಸ್ವಪ್ನಲೋಕ | 0 | 6 | 0 |
| ಮನೆಹೊರಗಿನಮಹಾಜೀವಿಗಳು | 0 | 5 | 0 |
| ಘಂಟಮಾರಾ ೪ಭಾಗಗಳು | 2 | 0 | 0 |
| ಮಾರ್ಪಾಟ | 0 | 4 | 0 |
| ಭಾರತದ ರಾಷ್ಟ್ರಗೀತೆ | 0 | 3 | 0 |
| ನಮ್ಮ ಬಹು ದೊಡ್ಡ ಶತ್ರು | 0 | 4 | 0 |

| | | | |
|---|---|---|---|
| ಕೈಲಾಸ | 0 | 3 | 0 |
| ಚೌತಿ | 0 | 4 | 0 |
| ಕತ್ತು ಕೊಯ್ದವರಾರು? | 0 | 5 | 0 |
| ಸಮಾಜದ ಅಗ್ನಿಕುಂಡ | 0 | 4 | 0 |
| ಬೆಳ್ಳಿಹಬ್ಬ | 0 | 4 | 0 |
| ಉಷಾ | 0 | 4 | 0 |
| ವಿಧಿಲೀಲೆ | 0 | 4 | 0 |
| ಪರಮಾಣು ಪ್ರಪಂಚ | 0 | 4 | 0 |
| ನೀತಿ ವಿನೋದ ಕತೆಗಳು | 0 | 12 | 0 |
| ಸಾಹಸ ಭೀಮ ವಿಜಯ | 0 | 8 | 0 |
| ಭಾರತದ ಗುರುಕುಲ | 0 | 6 | 0 |
| ಉತ್ತ ಪಗಡೆ | 0 | 6 | 0 |
| ಭರತೇಶ ದಿಗ್ವಿಜಯ | 0 | 8 | 0 |
| ಮನೋಪದೇಶ | 0 | 8 | 0 |
| ಜೀವನ ಕಲೆ | 0 | 10 | 0 |
| ಸೇವಾಪಥ | 0 | 8 | 0 |
| ಪ್ರತಿಜ್ಞಾ ಪೂರ್ತಿ | 0 | 12 | 0 |
| ಮಿತ ಸಂತತಿ | 0 | 6 | 0 |
| ಗುಪ್ತರೋಗ ನಿವಾರಣೆ | 0 | 8 | 0 |
| ಸೌಂದರ್ಯ | 0 | 5 | 0 |

●

## ಕಿರಿಯರಪ್ರಪಂಚದ ಪ್ರಕಟಣೆಗಳು:

| | | | |
|---|---|---|---|
| ಸ್ವತಂತ್ರ ಜೀವನೋಪಾಯ | 0 | 3 | 0 |
| ಸಂಶಯ ಪಿಶಾಚಿ | 0 | 10 | 0 |
| ನಾಡಕತೆಗಳು | 0 | 4 | 0 |
| ಕುಶಲವ | 0 | 7 | 0 |
| ಕಾವ್ಯಸಾಮ್ರಾಜ್ಯ | 1 | 8 | 0 |
| ಮಧುವನ | 3 | 0 | 0 |
| ಮುಂದಿನ ದೇವರು | 0 | 4 | 0 |
| ವ್ಯಭಿಚಾರಣಿ ಯಾರು | 1 | 4 | 0 |
| ಹೆಂಡ್ತಿ ಗಂಡನಾದರೆ | 0 | 4 | 0 |

| | | | |
|---|---|---|---|
| ಪುರುಷ ವಧು | 0 | 4 | 0 |
| ಸನ್ಯಾಸಿಯ ಸೋಗಿನಲ್ಲಿ | 0 | 10 | 0 |
| ನಂದಾದೀಪ | 1 | 0 | 0 |
| ದೇಶಭಕ್ತ | 1 | 8 | 0 |
| ಪ್ರೇಮವಿಜಯ | 1 | 0 | 0 |
| ಪ್ರಕಾಶ | 2 | 8 | 0 |
| ಮೂರು ಪ್ರಹಸನಗಳು | 1 | 0 | 0 |
| ಅನ್ನದೇವರು ಮತ್ತಿತರ ಕತೆಗಳು | 1 | 0 | 0 |
| ಭಾರತದಲ್ಲಿ ಜಾತಿಭೇದ | 1 | 0 | 0 |
| ವಿಷ್ಣುವಿನ ದಶಾಪರಾಧಗಳು | 0 | 12 | 0 |
| ಆಕಾಶ ಗಂಗೆ | 2 | 4 | 0 |
| ಸ್ವಾತಂತ್ರ್ಯವೀರ ಸಾವರಕರರು | 1 | 4 | 0 |
| ಜೀವನ ಸಂಗ್ರಾಮ | 1 | 8 | 0 |
| ಕದಂಬ | 1 | 4 | 0 |
| ಕವಿತಾಕಾಮಿನಿ | 2 | 0 | 0 |
| ಸ್ವರಾಜ್ಯ ವಿಜಯ | 0 | 8 | 0 |
| ಸಪ್ತಸಾಗರ | 0 | 12 | 0 |
| ಜಮೀನ್ದಾರ | 1 | 12 | 0 |

## ಇತರ ಪುಸ್ತಕಗಳು

| | | | |
|---|---|---|---|
| ಮನೆಮದ್ದು | 2 | 0 | 0 |
| ನೆನಪಿಗಾಗಿ | 2 | 0 | 0 |
| ಗೀತೆಯ ಕೈಗನ್ನಡಿ | 0 | 12 | 0 |
| ಸುಲಭದಲ್ಲಿ ಇಂಗ್ಲಿಷ್ | 1 | 8 | 0 |
| ಮೀರಾ ಬಾಯಿ | 0 | 10 | 0 |
| ಸಂಸ್ಕೃತಿ | 0 | 12 | 0 |
| ಪ್ರತೀಕಾರ | 0 | 8 | 0 |
| ಪ್ರೇಮ ಪ್ರವಾಹ | 0 | 8 | 0 |
| ಮುಗುಳು | [illegible] | 5 | 0 |
| ವತ್ಸಲಾ | 0 | 8 | 0 |

ವಿಚಾರಿಸಿದ್ದಲ್ಲಿ ಕೆಟಲಾಗನ್ನು
ಕಳಿಸಬಹುದು.

ವಿಳಾಸ:

**ನವಭಾರತ ಬುಕ್ ಡಿಪೊ, ಉಡುಪಿ.**
**ನವಯುಗ ಪ್ರೆಸ್, ಉಡುಪಿ.**